# ಚಂದಮಾಮ ಕ್ಯಾಮಲ್
## ಬಣ್ಣ ಹಾಕುವ ಸ್ಪರ್ಧೆ
ಪ್ರವೇಶಧನವಿಲ್ಲ



**ಬಹುಮಾನ ಗಳಿಸಿರಿ.**

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು



ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

**P.B. No. 9928, COLABA, Bombay-400 005.**

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ______________

Address ________________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *30-6-1979*

VISION

**CONTEST NO. 9**

— ಚುಕ್ಕಿ ಗೆರೆಯ ಉದ್ದಕ್ಕೂ ಕತ್ತರಿಸಿ —



# ಚಂದಮಾಮ

ಜೂನ್ 1979



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೨೫

ವಾರ್ಷಿಕ ಚಂದಾ ರೂ. ೧೫.೦೦

# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'

ಸಂಚಾಲಕರು: ನಾಗಿರೆಡ್ಡಿ

---

ಸಾಧಾರಣ ಮಕ್ಕಳು ಸಾವಿರ ಮಂದಿ ಇದ್ದರೂ ಕಾರ್ಯ ಸಾಧಕನಾಗಬಲ್ಲ ಒಬ್ಬ ಹುಡುಗನಿಗೆ ಈಡಲ್ಲ. ಅಂತಹವನೇ ವಂಶೋದ್ಧಾರಕನು. ವಿರಕ್ತನಾದ ತಂದೆಯ ಪರಾಂಬರಿಕೆಯನ್ನು ಚಿಕ್ಕಪ್ರಾಯದಲ್ಲೇ ಕಳೆದುಕೊಂಡು. ತನ್ನನ್ನು ತಾನೇ ಉದ್ಧರಿಸಿಕೊಳ್ಳುವವನಾಗಿ, ಸ್ವತಃ ಪ್ರಯತ್ನದಿಂದ ಮಹಾ ವಿದ್ವಾಂಸನಾಗಿ, ಒಂದು ವಂಶದ ಮಾರಣವನ್ನು ನಿಲ್ಲಿಸಿ ಚಿರಂಜೀವಿಯಾಗಿ ಉಳಿದಿರುವ 'ಆಸ್ತೀಕನು' ಈ ಸಂಚಿಕೆಯ ಪುರಾಣ ಬಾಲನಾಗಿ ಬೆಳಗುತ್ತಾನೆ.

## ಅಮರವಾಣಿ

ಏಕಾಕೀ ಗೃಹ ಸಂತ್ಯಕ್ತಃ
ಪಾಣಿ ಪಾತ್ರೋ ದಿಗಂಬರಃ
ಸೋಪಿ ಸಂವಾಹ್ಯತೇ ಲೋಕೇ
ತೃಷ್ಣಾಯಾ ಪಶ್ಯ ಕೌತುಕಂ

ಏಕಾಂಗಿಯೂ, ಮನೆಬಾಗಿಲಿಲ್ಲದವನೂ, ಭಿಕ್ಷಾಪಾತ್ರ ಹಿಡಿದವನೂ, ದಿಗಂಬರನೂ ಸಹ ದುರಾಶೆಗೆ ಗುರಿಯಾಗುವರು.

---

ಸಂಪುಟ: ೭೨ ಜೂನ್ '೭೯ ಸಂಚಿಕೆ: ೬

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦









**ಅಶೋಕ್ ಮಂಗಸೂಲಿ, ಅಥಣಿ (ಕರ್ನಾಟಕ)**

ಪ್ರ: ಧೂಮಕೇತು ಅಂದರೆ ಏನದು ?

ಉ: ಸೂರ್ಯನು ಕೇಂದ್ರವಾಗಿರುವ ಸೌರ ಕುಟುಂಬದಲ್ಲಿ ಆ ಕೇಂದ್ರದ ಸುತ್ತಲೂ ಪರಿಭ್ರಮಿಸುವ ಗ್ರಹಗಳೂ ಉಪಗ್ರಹಗಳೂ, ಉಲ್ಕೆಗಳೂ, ಬಾಲದ ನಕ್ಷತ್ರಗಳೂ ಇರುತ್ತವೆ. ಇವುಗಳು ದೀರ್ಘವೃತ್ತ ಕಕ್ಷೆಗಳಲ್ಲಿ ತಿರುಗುತ್ತ, ಸೂರ್ಯನಿಗೆ ಬಹಳ ಸಮೀಪಬಂದು ಮತ್ತೆ ದೂರ ಹೊರಟು ಹೋಗುತ್ತವೆ. ಸೂರ್ಯನ ಸಮೀಪಕ್ಕೆ ಬಂದಾಗಲೇ ಇವುಗಳಿಗೆ "ಬಾಲ" ಇರುವುದನ್ನು ನಾವು ನೋಡುತ್ತೇವೆ. ದೂರದಲ್ಲಿರುವಾಗ ಇವು ಗೋಲಾಕಾರದಲ್ಲೇ ಇರುತ್ತವೆ. ಇವುಗಳ ಕೇಂದ್ರದಲ್ಲಿ ಘನಪದಾರ್ಥದೊಂದಿಗೆ ಘನೀಭವಿಸಿದ ವಾಯುಪದಾರ್ಥವೂ ಇರುತ್ತದೆ. ಸೂರ್ಯನ ಕಾಂತಿಯಿಂದ ಈ ಪದಾರ್ಥವು ಆವಿಯಾಗಿ ಧೂಮಕೇತುವಿನ "ತಲೆ"ಗೆ ದೂರವಾಗಿ ತಳ್ಳಲ್ಪಟ್ಟು "ಬಾಲ"ದ ಹಾಗೆ ಕಾಣುತ್ತದೆ. ಗ್ರಹ ಚಲನಗಳನ್ನು ಕುರಿತು ಮೂಢ ವಿಶ್ವಾಸಗಳಿರುವ ಹಾಗೆ ಧೂಮಕೇತು ಕಾಣುಸುವುದರ ಬಗೆಗೂ ಮೂಢನಂಬುಗೆಗಳಿರುತ್ತವೆ.

**ಬಾಳ್‌ಕೆ. ಜಂಭೇಕರ್, ಬಸೀನ್ (ಮಹಾರಾಷ್ಟ್ರ)**

ಪ್ರ: ಮೋಡಗಳು ಕಪ್ಪಾಗಿರುತ್ತವೆ. ಮಳೆ ನೀರು ಬೆಳ್ಳಗಾಗಿರುವುದೇಕೆ ?

ಉ: ನೀರು ಬೆಳ್ಳಗಿರುವುದಿಲ್ಲ. ಆ ಸೂರ್ಯ ಕಾಂತಿಯನ್ನು ಮೋಡದೊಳಗಿನ ನೀರು ನಿರೋಧಿಸುವಾಗ ಅವು ಕಪ್ಪಗೆ ಕಾಣುತ್ತವೆ. ನೀರಿಗೆ ಬಣ್ಣವಿಲ್ಲ.

ಪ್ರ: ಬೆಟ್ಟಗಳು ಹೇಗೆ ಉಂಟಾಗುತ್ತವೆ ?

ಉ: ಭೂಖಂಡಗಳ ಬುಡದಲ್ಲಿ ಕಲ್ಲಿನ ಪದರುಗಳಿರುವುದೆಂದೂ, ಭೂಖಂಡಗಳು ಕದಲುತ್ತಿರುವುದೆಂದೂ ಈಗ ಶಾಸ್ತ್ರಜ್ಞರಿಗೆ ಗೊತ್ತಿದೆ. ಇಂತಹ ಕದಲಿಕೆಯಿಂದ ಎರಡು ಭೂಖಂಡಗಳ ನಡುವೆ ಒತ್ತಾಟವೇಳುವಾಗ ಕೆಳಗಿನ ಕಲ್ಲಿನ ಪದರು ಮೇಲಕ್ಕೆದ್ದು ಬರುತ್ತದೆ. ಪರ್ವತ ಪಂಕ್ತಿಗಳೆಲ್ಲಾ ಹಾಗೆ ಉಂಟಾದುವೇ. ನಾವು ಭಾರತದೇಶವೆಂದು ಹೇಳಿಕೊಳ್ಳುವ ಭೂಖಂಡವು ಆಸಿಯಾ ಖಂಡದ ಕಡೆಗೆ ಒತ್ತಿಕೊಂಡಿರುವ ಕಾರಣದಿಂದಲೇ ಹಿಮಾಲಯ ಪರ್ವತ ಪಂಕ್ತಿಗಳು ಏರ್ಪಟ್ಟವೆ ಅವು ಇನ್ನೂ ಮೇಲೆ ಏಳುತ್ತಲೇ ಇವೆ. ಒಂದು ಕಾಲದಲ್ಲಿ ಹಿಮಾಲಯ ಶಿಖರಗಳು ಸಮುದ್ರದ ಅಡಿಯಲ್ಲಿ ಇದ್ದುವೆನ್ನಲು ನಿದರ್ಶನವಾಗಿ ಅವುಗಳ ಮೇಲೆ ಜಲಚರಗಳ ಅವಶೇಷಗಳು ಸಿಗುತ್ತವೆ. ಭೂಖಂಡಗಳ ನಡುವೆ ಒತ್ತಾಟ ನಿಂತು ಹೋದರೆ ಪರ್ವತಗಳು ಬೆಳೆಯುವುದು ನಿಂತು, ಮಳೆ, ಬಿಸಿಲು, ಗಾಳಿಗಳಿಂದ ಸಣ್ಣಗಾಗುತ್ತಾ ಬರುತ್ತವೆ. ಪೂರ್ವ ತೀರದ ಬೆಟ್ಟಗಳು ಹಾಗೆ ಸಣ್ಣಗಾಗಿರುವಂಥವೇ.



## ೨೧

ಕ್ಷೌರಿಕನು ತಾನು ನೋಡಿದುದನ್ನು ಯಾರೊಂದಿಗೂ ಹೇಳುವುದಿಲ್ಲವೆಂದು ಮಣಿಭದ್ರನ ಮುಂದೆ ಪ್ರಮಾಣಮಾಡಿ ಅಲ್ಲಿಂದ ಹೊರಬಿದ್ದನು. ತನ್ನ ಮನೆಗೆ ನಡೆಯುತ್ತಾ ದಾರಿಯಲ್ಲಿ ಅವನು ತನ್ನೊಳಗೆ ಹೀಗೆ ಆಲೋಚಿಸಿಕೊಂಡನು :

"ನನ್ನ ಅದೃಷ್ಟದಿಂದಲೇ ಈ ದಿನ ದೊಡ್ಡದೊಂದು ಧನ ರಹಸ್ಯ ನನಗೆ ಗೊತ್ತಾಯಿತು. ನಾನು ಅಮ್ಮಾವರ ಉಗುರು ಕತ್ತರಿಸಲು ಹೋದ ಹೊತ್ತಿಗೇ ಆ ಘಟನೆ ನಡೆಯಿತೆಂದರೆ ನನ್ನ ಅದೃಷ್ಟ ತಾನೇ! ದಿಗಂಬರ ಜೈನನ ನಡುನೆತ್ತಿಯ ಮೇಲೆ ಗಟ್ಟಿ ದೊಣ್ಣೆಯಿಂದ ಹೊಡೆದರೆ ಅವನು ಬಂಗಾರದ ವಿಗ್ರಹವಾಗಿಬಿಡುತ್ತಾನೆ! ಇಷ್ಟು ಕಾಲದಿಂದ ಇದನ್ನು ತಿಳಿಯುವ ಅದೃಷ್ಟ ಬಾರದೆ ಹೋಯಿತಲ್ಲಾ! ನಾನು ದಿನಾ ಆರು ಗಂಟೆಕಾಲ ಬಗೆ ಬಗೆಯ ಮನುಷ್ಯರಿಗೆ ಕ್ಷೌರಮಾಡುತ್ತೇನೆ. ಕ್ಷೌರಮಾಡಿದರೆ ಸಿಗುವ ಆರೇಳು ಬೆಳ್ಳಿ ನಾಣ್ಯಗಳು ನನ್ನ ಸಂಸಾರದ ಖರ್ಚಿಗೆ ಎಲ್ಲಿಸಾಕು? ಊರೊಳಗೆ ಎಷ್ಟು ಮಂದಿ ದಿಗಂಬರ ಜೈನರು ತಿರುಗುತ್ತಿದ್ದಾರೆ! ನನಗೆ ಈ ಗುಟ್ಟು ಗೊತ್ತಾಗಿರುತ್ತಿದ್ದರೆ ಮಣಿಭದ್ರನ ಹಾಗೆ ಹತ್ತೇ ನಿಮಿಷದಲ್ಲಿ ಲಕ್ಷ ಬಂಗಾರದ ನಾಣ್ಯ ಸಂಪಾದಿಸಿಬಿಡುತ್ತಿದ್ದೆ! ಹಣ ಮಾಡುವುದರಲ್ಲಿ ವರ್ತಕರಿಗೆ ಸಾಟಿಯಾಗಿ ಕ್ಷೌರಿಕನಿರಲಾರನೆಂದರೆ ಸುಳ್ಳಲ್ಲ. ಇದ್ದಕ್ಕಿದ್ದ ಹಾಗೆ ಮನುಷ್ಯರು ಹೇಗೆ ಲಕ್ಷಾಧಿಕಾರಿಗಳಾಗುತ್ತಾರೋ ಎಂದು ಆಶ್ಚರ್ಯಪಡುತ್ತ, ಅದೆಲ್ಲಾ ಅವರ ಬುದ್ಧಿ ಶಕ್ತಿಯಿಂದ, ವ್ಯಾಪಾರದ ದಕ್ಷತೆಯಿಂದ ಎಂದುಕೊಂಡು ಸುಮ್ಮನಿದ್ದೆ. ಅದಕ್ಕೆ ಬೇಕಾದ್ದೆಲ್ಲಾ ಗಟ್ಟಿಮುಟ್ಟಾದ ತಿರುಳು ಮರದ ದೊಣ್ಣೆಯೂ, ದಿಗಂಬರಜೈನನೂ, ಬಲವಾದ ಪೆಟ್ಟೂ ಅಷ್ಟೇ! ತಮ್ಮವರಿಗೆ ಮಾತ್ರವೇ ಒಳಿತಾಗಬೇಕೆಂಬ ಸ್ವಾರ್ಥದಿಂದ ಅವರು ಈ ರಹಸ್ಯವನ್ನು ಯಾರಿಗೂ ಹೇಳುವುದಿಲ್ಲ. ನನಗೆ ತಿಳಿದು ಹೋಯಿತು. ನಾನು ಬಂದಿರುವುದನ್ನು ಗಮನಿಸದೆ ದೊಣ್ಣೇ ಕೆಲಸಮಾಡಿಬಿಟ್ಟ! ಮತ್ತೆ ನಾನಿರುವುದು ಗೊತ್ತಾಗಿ ನನ್ನ ಬಾಯಿ ಮುಚ್ಚಿಸಲಿಕ್ಕಾಗಿ ಒಂದಿಷ್ಟು ಲಂಚಕೊಟ್ಟ. ಇನ್ನೇನು ಕೊರತೆ ನನಗೆ? ನಾಳೆಯೇ ಊರೊಳಗಿರುವ ದಿಗಂಬರ ಜೈನರನ್ನೆಲ್ಲ ನನ್ನ ಮನೆಗೆ ಆಹ್ವಾನಿಸಿ



ಅಪಾರ ಬಂಗಾರವನ್ನು ಸಂಪಾದಿಸಿಬಿಡುತ್ತೇನೆ. ಇಷ್ಟ ಬಂದ ಹಾಗೆ ಖರ್ಚು ಮಾಡಬಹುದು. ದೇಶದಲ್ಲಿ ದಿಗಂಬರ ಜೈನರಿಗೇನೂ ಕೊರತೆಯಿಲ್ಲ."

ಹೀಗೆ ನೆನೆದುಕೊಂಡು, ಕಾರ್ಯಸಾಧಿಸಲು ಬೇಕಾಗುವಷ್ಟು ಬಲವಾದ ದೊಣ್ಣೆಗಳನ್ನು ತಂದು ತನ್ನ ಮನೆಯ ಚಾವಡಿಯ ಪೆಟಾರಿಯಲ್ಲಿ ಬಚ್ಚಿಟ್ಟು ಆ ದಿನವನ್ನು ಮುಳ್ಳಿನ ಮೇಲೆ ನಿಂತವನ ಹಾಗೆ ಕಳೆದನು. ಮರುದಿನ ಬೆಳಗಾದ ಕೂಡಲೇ ನಗರದ ಒಂದು ಮೂಲೆಯಲ್ಲಿದ್ದ ಜೈನಮಂದಿರಕ್ಕೆ ಹೋಗಿ, ಮಹಾವೀರನ ವಿಗ್ರಹಕ್ಕೆ ಪ್ರದಕ್ಷಿಣೆಮಾಡಿ ಮೂರು ಸಾರಿ ಸಾಷ್ಟಾಂಗ ಬಿದ್ದು, "ಜೈನರಿಗೆ ಜಯ! ಬ್ರಹ್ಮಚರ್ಯಕ್ಕೆ ಜಯ! ಜಿನಪ್ರಭು ನಮ್ಮನ್ನು ರಕ್ಷಿಸಲಿ! ಜಿನ ಪತ್ನಿ ಯಶೋಧರಮ್ಮ ಕಾಪಾಡಲಿ!" ಎಂದು ಗಟ್ಟಿಯಾಗಿ ಅರಚಿದನು.

ತರುವಾಯ ಆವನು ಜೈನ ಭಿಕ್ಷುಗಳ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರಮಾಡಿ, "ಸ್ವಾಮಿ, ತಾವು ತಮ್ಮ ಅನುಚರರನ್ನೆಲ್ಲ ಕರೆದುಕೊಂಡು ಈ ದಿನ ನನ್ನ ಮನೆಗೆ ಔತಣಕ್ಕೆ ದಯಮಾಡಬೇಕು!" ಎಂದು ಆಹ್ವಾನಮಾಡಿದನು.

ಅದಕ್ಕೆ ದೊಡ್ಡ ಭಿಕ್ಷು, "ಶ್ರಾವಕಾ, ನಮ್ಮನ್ನು ಏಕೆ ಔತಣಕ್ಕೆ ಕರೆಯುವೆ? ನಾವು ತಿಂಡಿಪೋತರಾದ ಸಾಮಾನ್ಯ ಬ್ರಾಹ್ಮಣರು ಎಂದುಕೊಂಡೆಯಾ? ನಾವೆ ಇಂಥ ಆಹ್ವಾನಗಳನ್ನು ಪಾಲಿಸುವುದಿಲ್ಲ. ಹಸಿವೆಯಾದರೆ ಯಾವ ಗೃಹಸ್ಥನ ಮನೆಗೋ ಹೋಗುತ್ತೇವೆ. ಅವರು ಕೊಟ್ಟದ್ದನ್ನು ನಮ್ಮ ಪ್ರಾಣ ಉಳಿಸಿ ಕೊಳ್ಳಲಿಕ್ಕೆ ಬೇಕಾದಷ್ಟೇ ತಿನ್ನುತ್ತೇವೆ. ರುಚಿಗಳನ್ನು ಬಿಟ್ಟವರು ನಾವು. ನಾವಾರೂ ಆಶೆ ಆಮಿಷಗಳಿಗೆ ಒಳಗಾಗುವವರಲ್ಲ." ಎಂದನು.

"ನಿಮ್ಮ ನಿಯಮ ನನಗೆ ಅರ್ಥವಾಯಿತು. ಆದರೆ ನನ್ನ ಅಭ್ಯರ್ಥನೆಯನ್ನು ಕೇಳಬೇಕು. ನನ್ನ ಮನೆಯಲ್ಲಿ ಬೇಕಾದಷ್ಟು ವಸ್ತ್ರಗಳಿವೆ. ಹಣವೂ ಸುಮ್ಮನೆ ನರಳುತ್ತಿದೆ. ಅವು ಗ್ರಂಥಗಳನ್ನು ತಯಾರಿಸಲಿಕ್ಕೂ, ದಾನ ಧರ್ಮಗಳನ್ನು ಮಾಡಲಿಕ್ಕೂ ನಿಮಗೆ ಉಪಯೋಗವಾಗಬಹುದು. ನಿಮ್ಮ ಇಷ್ಟ. ನೀವು ಬೇಡವೆಂದರೆ ಬೇರೆ ಭಿಕ್ಷುಗಳ ಬಳಿಗೆ ಹೋಗುತ್ತೇನೆ. ನಿಮ್ಮಂಥವರ ಕೈಗಳಿಂದ ಅವುಗಳ ಸದ್ವಿನಿಯೋಗವಾಗಲೆಂಬುದು ನನ್ನ ಉದ್ದೇಶ" ಎಂದು ಕ್ಷೌರಿಕನು ಎದ್ದನು.

ಈ ಮಾತು ಕೇಳಿ ಆ ಮಂದಿರದಲ್ಲಿದ್ದ ಆರು ಮಂದಿ ಭಿಕ್ಷುಗಳು ಏಕ ಕಂಠದಿಂದ, "ನಾವು ಬರುತ್ತೇವೆ. ನೀನು ಕೊಡುವುದು ವ್ಯಕ್ತಿಗತವಾದ ಬಹುಮಾನ ಅಲ್ಲವಾದುದರಿಂದ ಅದನ್ನು ತೆಗೆದುಕೊಳ್ಳಲು ನಮಗೆ ಅಭ್ಯಂತರವಿಲ್ಲ. ನೀನು ಬೇರೆಯವರನ್ನು ಹುಡುಕಿಕೊಂಡು ಹೋಗಿ ದಣಿಯುವ ಅಗತ್ಯವಿಲ್ಲ." ಎಂದು ಹೇಳಿ ಎದ್ದರು.

ವಿಚಿತ್ರವೇನೆಂದರೆ, ಬ್ರಹ್ಮಚಾರಿ, ಒಬ್ಬಂಟಿಗನಾದವನು, ಮನೆಮಠ ಬಿಟ್ಟವನು, ಸರ್ವಸ್ವವನ್ನೂ

ತ್ಯಜಿಸಿ ಭಿಕ್ಷಾಪಾತ್ರೆ ಹಿಡಿದವನು, ದಿಗಂಬರತ್ವ ಅವಲಂಬಿಸಿದವನು, ಪ್ರಾಯ ಮೀರಿದವನು, ಹೀಗೆಲ್ಲ ಆದವನಿಗೆ ಸಹಾ ಆಶೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಹೋಯಿತು! ಇದಕ್ಕಿಂತ ವಿಚಿತ್ರ ವೆಂದರೆ ಅವನು ತನ್ನ ದುರಾಶೆಯನ್ನು ಬುದ್ಧಿವಂತಿಕೆ ಯಿಂದ ಸಮರ್ಥಿಸಿಕೊಳ್ಳುವುದು. ಕೂದಲು ಬಿಳಿ ಯಾಗಿ, ಹಲ್ಲುಗಳುದುರಿ, ಕಣ್ಣಿಗೆ ಮಸಕು ಕವಿದು, ಕಿವಿಗಳು ಕೇಳದ ವೃದ್ಧನಲ್ಲಿ ಸಹಾ ದುರಾಶೆ ಮಾತ್ರ ಬೆಳೆಯುತ್ತಾ ಇರುತ್ತದೆ.

ಕ್ಷೌರಿಕನು ಜೈನ ಭಿಕ್ಷುಗಳನ್ನು ತನ್ನ ಮನೆಯ ಚಾವಡಿಯೊಳಗೆ ಕರೆದುಕೊಂಡು ಬಂದು, ಬಾಗಿಲು ಗಳನ್ನೆಲ್ಲ ಬಿಗಿದು, ಪೆಟಾರಿಯನ್ನು ತೆರೆದನು. ಅದ ರೊಳಗಿನಿಂದ ಬಟ್ಟೆಗಳನ್ನೂ, ಹಣವನ್ನೂ ತೆಗೆಯುವು ದಕ್ಕೆ ಬದಲಾಗಿ, ತಿರುಳುಮರದ ಗಟ್ಟಿಯಾದ ದೊಣ್ಣೆ ಯನ್ನು ಮೇಲಕ್ಕೆತ್ತಿ ಭಿಕ್ಷುಗಳ ತಲೆಗಳ ಮೇಲೆ ಬಲವಾಗಿ ಹೊಡೆಯ ತೊಡಗಿದನು. ಒಬ್ಬ ಭಿಕ್ಷು ವಾದರೂ ಮಣಿಭದ್ರನ ಪೆಟ್ಟು ತಿಂದ ಭಿಕ್ಷುವಿನ ಹಾಗೆ ನಗುತ್ತಾ ಪೆಟ್ಟು ತಿನ್ನದೆ, ಒಂದೇಟಿಗೆ ಸಾಯುವುದಕ್ಕೆ ಬದಲಾಗಿ, ತಲೆ ತಿರುಗಿಸಿ ಪೆಟ್ಟು ತಪ್ಪಿಸಿಕೊಳ್ಳುತ್ತ, ಕಿರಿಚಾಡುವುದನ್ನು ನೋಡಿ ಕ್ಷೌರಿಕನಿಗೆ ಆಶ್ಚರ್ಯವೂ, ಅದರ ಬೆನ್ನಿಗೆ ಕೋಪವೂ ಉಂಟಾಯಿತು. "ಇವರೆಲ್ಲ ಕಳ್ಳ ವೇಷಧಾರೀ ಭಿಕ್ಷು ಗಳೋ ಏನೋ? ಇಲ್ಲದಿದ್ದರೆ ಮಾತಾದರೆ ಚಿನ್ನ ವಾಗಿ ಬೀಳಬೇಕಿತ್ತಲ್ಲಾ" ಎಂದುಕೊಂಡನು.

ಈ ಜೈನ ಭಿಕ್ಷುಗಳು ನೆತ್ತಿಗೆ ಬೀಳುವ ಪೆಟ್ಟನ್ನು ತಪ್ಪಿಸಿಕೊಂಡು ಎಲ್ಲೆಲ್ಲೋ ಬೀಳಿಸಿಕೊಳ್ಳುತ್ತ, ಓಡಿಹೋಗುವ ಪ್ರಯತ್ನದಲ್ಲಿ ಇಲಿಗಳ ಹಾಗೆ ಚಾವಡಿಯೊಳಗೆಲ್ಲಾ ತಿರುಗಾಡುತ್ತಿರುವುದನ್ನು ನೋಡಿ ಅವನಿಗೆ ಹುಚ್ಚು ಆವೇಶವೇ ಬಂದಿತು. ಬಾಗಿಲುಗಳು ಗಟ್ಟಿ ತಾಳ ಹಾಕಿದ್ದರಿಂದ ಭಿಕ್ಷುಗಳಿಗೆ ತಪ್ಪಿಸಿಕೊಂಡು ಹೋಗಲು ಸಾಧ್ಯವಾಗಲಿಲ್ಲ.



ಕಡೆಗೆ ಇಬ್ಬರು ಭಿಕ್ಷುಗಳು ಸತ್ತುಬಿದ್ದರು. ಅವರು ಸತ್ತರೆಂದು ಗೊತ್ತಾದ ಕೂಡಲೇ, ಅವರು ಬಂಗಾರದ ವಿಗ್ರಹಗಳಾಗುವರೇನೋ ಎಂದು ಕ್ಷೌರಿಕನು ಅತ್ಯಾಶೆ ಯಿಂದ ಸ್ವಲ್ಪ ಹೊತ್ತು ನೋಡಿದನು. ಆದರೆ ಅವರು ರಕ್ತ ಸುರಿಸುವ ಶವಗಳಾಗಿಯೇ ಇದ್ದರು.

ಉಳಿದ ನಾಲ್ವರು ಭಿಕ್ಷುಗಳೂ ಕ್ಷೌರಿಕನ ಕಾಲಿಗೆ ಬಿದ್ದು ಹೊರಳುತ್ತ "ನಮ್ಮನ್ನು ಉಳಿಸು. ನಾವು ನಿನಗೇನು ಮಾಡಿದೆವು? ದೋಚಿಕೊಳ್ಳಲಿಕ್ಕಾದರೂ ನಮ್ಮಲ್ಲಿ ಏನೂ ಇಲ್ಲವಲ್ಲಾ! ಈಗಲೇ ಇಬ್ಬರ ಪ್ರಾಣ ತೆಗೆದೆ. ಉಳಿದವರನ್ನಾದರೂ ಜೀವ ದೊಂದಿಗೆ ಉಳಿಸಪ್ಪಾ! ಬಿಡಪ್ಪಾ!" ಎಂದು ರೋದಿಸಿದರು.

ಕ್ಷೌರಿಕನು ಆವೇಶದಿಂದ ಚೀರುತ್ತ, "ನಿಮ್ಮಲ್ಲಿ ಒಬ್ಬನೂ ಬಂಗಾರವಾಗಲಿಲ್ಲ! ನಿಮ್ಮ ತಕ್ಕ ತೌಳಿಬಿಟ್ಟು ಬಂಗಾರದ ವಿಗ್ರಹವಾಗಿ ಬೀಳುವಿರಾ ಇಲ್ಲವಾ! ಮರ್ಯಾದೆಯಿಂದ ಹೇಳುತ್ತೇನೆ! ಆಗಿರಿ

ಬಂಗಾರದ ವಿಗ್ರಹ!" ಎಂದು ಮತ್ತೆ ಸಿಕ್ಕಾಬಟ್ಟೆ ದೊಣ್ಣೆ ಹೊಡೆತಕ್ಕೆ ತೊಡಗಿದನು.

ಜೈನ ಭಿಕ್ಷುಗಳ ಭಯಂಕರವಾದ ಕೂಗನ್ನು ಕೇಳಿ ಆ ದಾರಿಯಾಗಿ ಹೋಗುವ ರಕ್ಷಕಭಟರು, ಬಾಗಿಲು ಒಡೆದು ಚಾವಡಿಯೊಳಗೆ ಪ್ರವೇಶಿಸಿ ನಾಲ್ಕು ಮಂದಿ ಭಿಕ್ಷುಗಳನ್ನು ಕಾಪಾಡಿದರು. ಆಮೇಲೆ, ಆ ಭಿಕ್ಷು ಗಳನ್ನೂ, ಎರಡು ಶವಗಳನ್ನೂ, ಕ್ಷೌರಿಕನನ್ನೂ ಸಾಗಿಸಿಕೊಂಡು ಹೋಗಿ ನ್ಯಾಯಾಲಯದಲ್ಲಿ ನಿಲ್ಲಿಸಿ, ನಡೆದ ಸಂಗತಿಯನ್ನು ಹೇಳಿದರು.

ನ್ಯಾಯಾಧಿಪತಿ ಎಲ್ಲವನ್ನೂ ಕೇಳಿ, ಕ್ಷೌರಿಕನನ್ನು ನೋಡಿ, "ಇಂಥಾ ಘೋರಕೃತ್ಯ ಏತಕ್ಕಾಗಿ ಮಾಡಿದೆ?" ಎಂದು ಕೇಳಿದನು.

"ನಿನ್ನೆ ಮಣಿಭದ್ರರು ಮಾಡಿದ ಕೆಲಸವನ್ನೇ ನಾನೂ ಮಾಡಿದೆ. ನನ್ನದು ಮಾತ್ರ ಹೇಗೆ ತಪ್ಪಾ ಗುತ್ತದೆ?" ಎಂದನು ಕ್ಷೌರಿಕ.

"ನೀನು ಹೇಳುವ ಮಾತಿನ ಅರ್ಥವೇನು?" ಎಂದು ನ್ಯಾಯಾಧೀಶನು ಕೇಳಿದ.

"ಮಣಿಭದ್ರರು ನಿನ್ನೆ ಒಬ್ಬ ದಿಗಂಬರ ಜೈನನ ತಲೆಯ ಮೇಲೆ ದೊಣ್ಣೆಯಿಂದ ಹೊಡೆದ ಕೂಡಲೇ ಅವನು ಬಂಗಾರದ ವಿಗ್ರಹವಾಗಿ ಬಿದ್ದ. ಅದನ್ನು ನಾನು ಈ ಎರಡು ಕಣ್ಣುಗಳಿಂದಲೂ ನೋಡಿದೆ. ಬಂಗಾರವಾದ ಆ ವಿಗ್ರಹದ ಬೆರಳಿನ ತುಂಡೂ ನನ್ನ ಹತ್ತಿರವಿದೆ." ಎಂದು ಕ್ಷೌರಿಕನು ನಡೆದ ಸಮಾಚಾರ ವನ್ನೆಲ್ಲಾ ಹೇಳಿದನು.

ನ್ಯಾಯಾಧೀಶನು ಭಟರನ್ನು ಕಳುಹಿಸಿ, ಮಣಿ ಭದ್ರನನ್ನು ಕರೆಯಿಸಿ, "ನಿನ್ನೆ ನೀನು ಒಬ್ಬ ದಿಗಂಬರ ಜೈನನನ್ನು ಕೊಂದೆಯೇನು?" ಎಂದು ಕೇಳಿದನು.

ಮಣಿಭದ್ರನು ಏನೂ ಮುಚ್ಚಿಡದೆ ತನ್ನ ಯಾವತ್ತೂ ಕಥೆಯನ್ನು ಹೇಳಿದನು. ಅದನ್ನು ಕೇಳಿದ ಮೇಲೆ ನ್ಯಾಯಾಧೀಶನು ಕ್ಷೌರಿಕನನ್ನು ನೋಡಿ, "ಈ ಮೂಢನನ್ನು ತೆಗೆದುಕೊಂಡು ಹೋಗಿ ಈಟಿಗಳಿಂದ ತಿವಿದು ಕೊಲ್ಲಿರಿ" ಎಂದು ಅಪ್ಪಣೆ ಮಾಡಿದನು.

ಕ್ಷೌರಿಕನನ್ನು ಭಟರು ಎಳೆದುಕೊಂಡು ಹೋದ ಮೇಲೆ, ನ್ಯಾಯಾಧೀಶನು ತಲೆದೂಗುತ್ತ, "ಆಲೋ ಚನೆ ಮಾಡಿ ಸಂಗತಿ ಸಂದರ್ಭಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ದುಡಿಕಿ ಕೆಲಸ ಮಾಡುವವನ ಗತಿ ಇಷ್ಟೇ. ಹಿಂದೆ ಒಬ್ಬ ಬ್ರಾಹ್ಮಣನು ಹಿಂದು ಮುಂದು ಆಲೋಚನೆ ಮಾಡದೆ ವಿಶ್ವಾಸವಾಗಿದ್ದ ಮುಂಗುಸಿಯನ್ನು ಕೈಯಾರೆ ಕೊಂದು ದುಃಖಿ ಕ್ಕೀಡಾದನಲ್ಲ?" ಎಂದನು ನ್ಯಾಯಾಧೀಶ.

"ಅದೇನು ಸಂಗತಿ? ಹೇಗಾಯಿತು?" ಎಂದು ಮಣಿಭದ್ರನು ಕೇಳಲು, ನ್ಯಾಯಾಧೀಶನು ಆ ಕಥೆ ಯನ್ನು ಹೇಳಿದನು.





# ಹಗಲು ಕಳ್ಳ

ತನ್ನ ತಲೆಯೊಡೆಸುವ ಪಂಥ ಕಟ್ಟಿದ ಬೇತಾಳದ ಮುಡಿಬಿಡದ ಶಠವೀರನಾದ ತ್ರಿವಿಕ್ರಮ ರಾಜನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ ! ನಿನ್ನ ಈ ಕಷ್ಟವನ್ನು ನೋಡುವಾಗ ಇದು ನಿನಗೆ ಯಾವ ಜನ್ಮದ ಅಪರಾಧಕ್ಕೆ ಶಿಕ್ಷೆಯೋ ಅನಿಸುತ್ತದೆ. ಈ ಜನ್ಮದಲ್ಲಿ ಕಳ್ಳತನ ಮಾಡಿ ಸಿಕ್ಕಿಬಿದ್ದವನಿಗೂ ಶಿಕ್ಷೆಯೇ ಆಗಿಲ್ಲವೆಂದರೆ ಆಶ್ಚರ್ಯವಾಗುತ್ತದೆ. ಆ ಕಳ್ಳನ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ಶ್ರಮವನ್ನು ಮರೆತು ನಡೆಯುವೆಯಂತೆ" ಎಂದು ಕಥೆಯನ್ನು ತೊಡಗಿತು :

ಹಿಂದೆ ಒಂದುಸಾರಿ ಕಾಂಚೀಪುರದಲ್ಲಿ ಹಗಲು ಕಳ್ಳತನವು ಪ್ರಾರಂಭವಾಯಿತು. ಕಳ್ಳನಾರೆಂದು ಯಾರಿಗೂ ಗೊತ್ತಾಗಲಿಲ್ಲ. ಕಳ್ಳನು ಬಹಳ ಚಾಕಚಕ್ಯತೆಯಿಂದ ಕದ್ದುಬಿಡುತ್ತಿದ್ದನು. ಹಗಲು ಹೊತ್ತಿನಲ್ಲಿ ಅಂಗಡಿಯಲ್ಲಿ ಸಾಮಾನು ಕೊಂಡುಕೊಳ್ಳುವಾಗ,

ಬೇತಾಳ ಕಥೆಗಳು



ಸಂತೆಯಲ್ಲಿ ತರಕಾರಿ ಕೊಳ್ಳುವಾಗ, ವ್ಯಾಪಾರಿಗಳಿಂದಲೂ, ಗಿರಾಕಿಗಳಿಂದಲೂ ಹಣವನ್ನು ಕದ್ದುಬಿಡುತ್ತಿದ್ದನು, ಹೇಗೆ ತಮ್ಮ ಹಣ ಮಾಯವಾಗುವುದೆಂದು ಹಣ ಕಳಕೊಂಡವರಿಗೆ ಆಗಲೇ ತಿಳಿಯುತ್ತಿದ್ದಿಲ್ಲ. ಯಾವ ಹೊತ್ತಿಗೆ ಕಳವಾಯಿತೆಂಬುದೂ ಗೊತ್ತಾಗುತ್ತಿಲ್ಲ. ಸತ್ರಗಳಲ್ಲಿಯೂ ಈ ಬಗೆಯ ಹಗಲು ಕಳವುಗಳಾಗುತ್ತಿದ್ದುವು. ರೈತರು, ವರ್ತಕರು, ರಾಜೋದ್ಯೋಗಿಗಳು ಮುಂತಾದ ಎಲ್ಲಾ ಬಗೆಯವರೂ ಈ ಹಗಲು ಕಳ್ಳತನಕ್ಕೆ ಒಳಗಾದವರೇ. ಆಶ್ಚರ್ಯವೆಂದರೆ ಮನೆಯೊಳಗೆ ಮಾತ್ರ ಆ ಕಳ್ಳ ಬರುತ್ತಿದ್ದಿಲ್ಲ. ರಾತ್ರಿಯಲ್ಲಿಯೂ ಬಾರನು.

ಈ ಹಗಲು ಕಳ್ಳತನವನ್ನು ಕುರಿತು ನಗರಪಾಲಕನಿಗೆ ಅನೇಕ ಫಿರ್ಯಾದಿಗಳು ಹೋದುವು. ಅವನು ಕಳ್ಳನ ಸುಳಿವನ್ನು ತಿಳಿಯಲು ಪ್ರತ್ಯೇಕ ಚಾರರನ್ನು ನಿಯಮಿಸಿದನು. ಅವರು ಬೇರೆ ಬೇರೆ ವೇಷಗಳಿಂದ ಅಲ್ಲಲ್ಲಿ ತಿರುಗುತ್ತಿದ್ದರು. ಅವರಿಗೆ ಸಹಾ ಹಗಲು ಕಳ್ಳನಾರೆಂದು ಗೊತ್ತಾಗಲಿಲ್ಲ. ಕಳ್ಳತನವಾದ ಬಹಳ ಹೊತ್ತಿನ ಮೇಲೆಯೇ ತಾವು ಹಣ ಕಳೆದುಕೊಂಡೆವೆಂದು ಗೊತ್ತಾಗುವ ಹಾಗಿತ್ತು ಅವನ ಕೈ ಚಳಕ.

ಕೆಲವರು ಅವನನ್ನು ಕುರಿತು ಅದ್ಭುತವಾಗಿ ಮಾತಾಡುತ್ತಿದ್ದರು. ಅವನಲ್ಲಿ ಏನೋ ಮಂತ್ರದ ಬೂದಿ ಇದೆಯೆಂದೂ, ಅದನ್ನು ಹಾರಿಸಿ ಬಿಟ್ಟರೆ ತಮ್ಮ ಚೀಲದ ಅಥವಾ ಜೇಬಿನ ಹಣ ಅವನ ಜೇಬಿಗೆ ಹೋಗಿ ಬಿಡುವುದೆಂದೂ ಹೇಳುತ್ತಿದ್ದರು. "ಯಾವನೋ ಮೋಡೀ ಮಂತ್ರಗಾರನ ಕೆಲಸವಿದು!" ಎಂದು ಮತ್ತೆ ಕೆಲವರು ವಾದಿಸುತ್ತಿದ್ದರು.

ನಗರ ಪಾಲಕನು ಹಾಗೆಲ್ಲಾ ಊಹಿಸಿರಲಿಲ್ಲ. ಆ ಕಳ್ಳನು ಎಲ್ಲರ ಹಾಗೆಯೇ ಇರುವವನೆಂದೂ, ಕೈ ಚಳಕದಲ್ಲಿ ಗಟ್ಟಿಗನೆಂದೂ ತಿಳಿದಿದ್ದನು. ಅದಕ್ಕೆ ತಕ್ಕ ಉಪಾಯವೇನೆಂದೂ ಆಲೋಚಿಸುತ್ತಿದ್ದನು.

ಒಂದುಸಾರಿ ಆ ಹಗಲು ಕಳ್ಳನಿಗೆ ಬೀದಿಯಲ್ಲಿ ನಡೆಯುತ್ತಿದ್ದ ಒಂದು ವ್ಯಕ್ತಿಯ ಹಣದ ಚೀಲ ಸಿಕ್ಕಿಬಿಟ್ಟಿತು. ಆ ವ್ಯಕ್ತಿಗೆ ತಿಳಿಯದಂತೆ ಚೀಲವನ್ನು ಅಪಹರಿಸಿ ಬಹು ದೂರ ಹೋಗಿ ಅದರೊಳಗೆ ನೋಡಿದನು. ಹಣದೊಂದಿಗೆ ಒಂದು ಕಾಗದವೂ ಇದ್ದಿತು. ಅದು ಒಬ್ಬಳು ಹೆಂಗುಸು ಬರೆದ ಕಾಗದ, ತನ್ನ ಗಂಡ ಸಾವು ಬದುಕಿನ ಅಂಚಿನಲ್ಲಿರುವುದರಿಂದ ಅವರನ್ನುಳಿಸಲು ಹಣವು ಅಗತ್ಯವಾಗಿದೆ. ಕೂಡಲೇ ಹಣ ಕಳುಹಿಸಿ ತನ್ನ ಕುಂಕುಮ ಸೌಭಾಗ್ಯವನ್ನು ಕಾಪಾಡಬೇಕೆಂದು ಅವಳು ತನ್ನ ಅಣ್ಣನಿಗೆ ಬರೆದ ಪತ್ರವದು. ಆ ಅಣ್ಣನಿಂದಲೇ ಅವನು ಅದನ್ನು ಅಪಹರಿಸಿದ್ದನು.

ಈ ಕಾಗದವನ್ನು ಓದಿ ಕಳ್ಳನ ಗುಂಡಿಗೆ ದ್ರವಿಸಿ ಹೋಯಿತು. ಅವನು ತಾನು ಕದ್ದ ಹಣದ ಚೀಲವನ್ನೆತ್ತಿಕೊಂಡು, ಆ ಕಾಗದದಲ್ಲಿ ಗುರುತಿಸಲ್ಪಟ್ಟ ಹೆಂಗುಸಿನ ಮನೆಗೆ ಹೋದನು. ಕೂಡಲೇ ಅಲ್ಲಿ ಕಾದಿದ್ದ ರಕ್ಷಕ ಭಟರು ಅವನನ್ನು ಸುತ್ತಿ ಹಿಡಿದು

ಬಂಧಿಸಿಬಿಟ್ಟರು. ಕಳ್ಳನು ಯಾವ ವ್ಯಕ್ತಿಯಿಂದ ಆ ಚೀಲವನ್ನು ಕದ್ದಿದ್ದನೋ ಆ ವ್ಯಕ್ತಿಯೇ ಮನೆಯೊಳಗಿನಿಂದ ಹೊರಗೆ ಬಂದನು. ಅವನು ವೇಷ ಬದಲಾಯಿಸಿಕೊಂಡಿದ್ದ ನಗರ ಪಾಲಕನೇ !

ಹಗಲು ಕಳ್ಳನನ್ನು ಹಿಡಿಯಲಿಕ್ಕಾಗಿ ಅವನು ಒಂದು ತಿಂಗಳಿಂದಲೂ ಹಣದ ಚೀಲ ವಿಟ್ಟುಕೊಂಡು ತಿರುಗಾಡುತ್ತಿದ್ದನು. ಅವನ ಉಪಾಯಕ್ಕೆ ಈ ದಿನ ಜಯಸಿಕ್ಕಿತು. ಹಗಲು ಕಳ್ಳ ಸಿಕ್ಕಿಬಿದ್ದ. ಅವನು ಊರೊಳಗಿನವನೇ ಆದ ರಂಗಣ್ಣ.

ಅವನ ವಿಚಾರಣೆಗೆ ಊರವರನ್ನೆಲ್ಲಾ ಕರೆಸಲಾಯಿತು. ವಿಚಾರಣೆಯಲ್ಲಿ ಹಗಲು ಕಳ್ಳನು ಅವನೇ ಎಂಬುದು ರುಜುವಾಯಿತು. ಆದರೆ ನಗರಪಾಲಕನು ರಂಗಣ್ಣನಿಗೆ ಯಾವ ಶಿಕ್ಷೆಯನ್ನೂ ಕೊಡದೆ, ಇನ್ನು ಮೇಲೆ ಕಳ್ಳತನ ಮಾಡುವುದಿಲ್ಲವೆಂದು ರಂಗಣ್ಣನಿಂದ ಪ್ರಮಾಣ ಮಾಡಿಸಿ ಬಿಟ್ಟುಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ನಗರಪಾಲಕನು ಅಷ್ಟೊಂದು ಶ್ರಮಪಟ್ಟು ಹಗಲು ಕಳ್ಳನನ್ನು ಹಿಡಿದು, ಯಾವ ಶಿಕ್ಷೆಯನ್ನೂ ಕೊಡದೆ ಹಾಗೇಕೆ ಬಿಟ್ಟುಬಿಟ್ಟನು ? ಅವನನ್ನು ಶಿಕ್ಷಿಸುವ ಉದ್ದೇಶವಿಲ್ಲದಿದ್ದರೆ ಊರವರನ್ನೆಲ್ಲ ಕರೆದು ವಿಚಾರಣೆ ಮಾಡಬೇಕೇಕೆ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಒಡೆದು ಪುಡಿ ಪುಡಿಯಾಗುತ್ತದೆ !" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕಳ್ಳನನು ಹಿಡಿಯುವುದರಲ್ಲಿ ನಗರಪಾಲಕನು ಬಹಳ ಕಷ್ಟವನ್ನೇನೂ ಪಟ್ಟಿಲ್ಲ. ಕಳ್ಳನಲ್ಲಿ ಮಾನವತ್ವವಿದ್ದರೆ ಹೊರತು ನಗರಪಾಲಕನು ಮಾಡಿದ ಉಪಾಯಕ್ಕೆ ಜಯಸಿಗುತ್ತಿದ್ದಿಲ್ಲ. ಮಾನವತ್ವದಿಂದ ಕಳ್ಳನು ತಾನಾಗಿ ಬಂದು ಸಿಕ್ಕಿಕೊಂಡುದರಿಂದ ಅವನನ್ನು ತೀವ್ರ ಶಿಕ್ಷೆಗೆ ಗುರಿಪಡಿಸುವುದು ಮಾನವತ್ವಕ್ಕೆ ವಿರೋಧವೇ ಆಗುತ್ತದೆ. ನಗರಪಾಲಕನು ರಂಗಣ್ಣನಿಗೆ ಸಣ್ಣ ಶಿಕ್ಷೆಯನ್ನು ಸಹಾ ಕೊಡದೆ ಬಹಿರಂಗ ವಿಚಾರಣೆ ನಡೆಯಿಸಿದನೇಕೆಂದರೆ, ಅದುವರೆಗೆ ಹಗಲು ಕಳ್ಳನು ಯಾರು ಏನೆಂಬುದು ಯಾರಿಗೂ ತಿಳಿಯದು. ಅವನ ಮುಖವು ಹತ್ತು ಮಂದಿಗೆ ತಿಳಿದು ಹೋದ ಮೇಲೆ ಹಗಲು ಕಳ್ಳತನ ಮಾಡಲು ಅವನಿಗೂ ಸಾಧ್ಯವಾಗದು. ಇವನೇ ಹಗಲು ಕಳ್ಳನೆಂದು ಎಲ್ಲರಿಗೂ ತಿಳಿಯಬೇಕೆಂತಲೇ ನಗರಪಾಲಕನು ಬಹಿರಂಗ ವಿಚಾರಣೆ ನಡೆಸಿದನು. ಇಷ್ಟಾದ ಮೇಲೆ ಅವನು ಹಗಲು ಕಳ್ಳತನ ಮಾಡಲು ಸಾಧ್ಯವಿಲ್ಲದಂತಾದುದೇ ಅವನಿಗೊಂದು ಶಿಕ್ಷೆಯಂತಾಯಿತು."

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಯಲ್ಲಿ ನೇತಾಡ ತೊಡಗಿತು.



# ಅರ್ಹತೆಯ ಶೋಧನೆ

**ಕಾಂ**ಭೋಜದೇಶದ ಮಹಾಮಂತ್ರಿ ಸುಮಂತ್ರನು ಮಹಾ ಮೇಧಾವಿ. ತನ್ನ ಅನಂತರ ತನ್ನ ಸ್ಥಾನದಲ್ಲಿ ಕೆಲಸಮಾಡಲು ಅರ್ಹನಾದವನನ್ನು ತಾನೇ ಆರಿಸಿ, ತರಬೇತಿ ಕೊಡುವುದು ಒಳ್ಳೆಯದೆಂದು ಅವನಿಗೆ ತೋರಿತು. ಮಂತ್ರಾಲೋಚನೆಯ ಶಿಕ್ಷಣಕ್ಕೆ ಅರ್ಹರಾದ ಆಸಕ್ತಿಯುಳ್ಳ ಅಭ್ಯರ್ಥಿಗಳು ಬೇಕೆಂದು ರಾಜ್ಯದೊಳಗೆಲ್ಲಾ ಡಂಗುರ ಹಾಕಿಸಿದನು.

ಇದರ ಕಾರ್ಯಾಲಯವನ್ನು ನಗರದ ಹೊರಗೆ ಬಹುದೂರದಲ್ಲಿ ಒಂದು ಡೇರೆ ಹಾಕಿಸಿ ತಾತ್ಕಾಲಿಕವಾಗಿ ಏರ್ಪಾಡು ಮಾಡಿದನು. ಡಂಗುರದಲ್ಲಿ ಸಾರಿದಂತೆ ಅಲ್ಲಿ ಮಂತ್ರಿಯನ್ನು ನೋಡಲು ಎಲ್ಲೆಲ್ಲಿಂದಲೋ ಅನೇಕ ಮಂದಿ ಯುವಕರು ಬಂದರು.

ಸುಮಂತ್ರನು ಅವರಲ್ಲಿ ಇಬ್ಬರನ್ನು ಆರಿಸಿ, ಅವರಿಗೊಂದು ಕೊನೆಯ ಪರೀಕ್ಷೆ ಕೊಡಲು ಬಗೆದು, "ನೀವು ಒಂದು ಅಪಾಯಕರವಾದ ಕಾರ್ಯವನ್ನು ಮಾಡಿ ಬರಬೇಕು. ಈ ಕಾಗದವನ್ನು ಅರ್ಧ ದೂರದ ವರೆಗೆ ಒಬ್ಬನೂ, ಉಳಿದರ್ಧ ದೂರದವರೆಗೆ ಇನ್ನೊಬ್ಬನೂ ತೆಗೆದುಕೊಂಡು ನಮ್ಮ ಮಹಾರಾಜನ ದರಬಾರಿಗೆ ಹೋಗಿ ರಾಜನ ಕೈಗೆ ತಲುಪುವಂತೆ ಮಾಡಬೇಕು. ನೀವು ದಾರಿಯಲ್ಲಿ ಈ ಕಾಗದವನ್ನು ಓದಲೇ ಕೂಡದು. ಓದುವುದಿಲ್ಲವೆಂದು ಪ್ರಮಾಣಮಾಡಬೇಕು." ಎಂದನು.

ಧರ್ಮದತ್ತ, ಸುಮಿತ್ರರೆಂಬ ಆ ಯುವಕರಿಬ್ಬರೂ, ಸುಮಂತ್ರನು ಕೊಟ್ಟ ಕಾಗದದೊಂದಿಗೆ ಹೊರಟರು. ಮೊದಲಿನ ಅರ್ಧದೂರದವರೆಗೆ ಕಾಗದವನ್ನು ಇಟ್ಟುಕೊಂಡಿದ್ದ ಸುಮಿತ್ರನು ಅದನ್ನು ಗುಟ್ಟಾಗಿ ಓದಿ, ಹೆದರಿ, ಅದನ್ನು ಧರ್ಮದತ್ತನಿಗೆ ಕೊಟ್ಟು ಎತ್ತಲೋ ಪತ್ತೆಯಿಲ್ಲದೆ ಓಡಿಹೋದನು.

ಧರ್ಮದತ್ತನು ಮಾತ್ರ ಕಾಗದವನ್ನು ಓದುವ ಗೊಡವೆಗೆ ಹೋಗದೆ, ಸೀದಾ ರಾಜ ಸಭೆಗೆ ಹೋಗಿ ರಾಜನಿಗೆ ಕಾಗದ ಕೊಡಲಿದೆ ಎನ್ನಲು, ವಿದೂಷಕನು ತೆಗೆದುಕೊಂಡು ರಾಜನಿಗೆ ಕೊಟ್ಟನು.

ರಾಜನು ಅದನ್ನು ಬಿಡಿಸಿ ಹೀಗೆ ಓದಿದನು: "ಈ ಪತ್ರ ನಿಮಗೆ ಕೊಡುವವನನ್ನು ಗಲ್ಲಿಗೇರಿಸಿರಿ– ಸುಮಂತ್ರ", ಕೂಡಲೇ ರಾಜನು ಧರ್ಮದತ್ತನನ್ನು ಗಲ್ಲಿಗೇರಿಸಲು ಆಜ್ಞೆ ಮಾಡಿದನು.

"ಮಹಾರಾಜರೇ, ನಿಮಗೆ ಕಾಗದ ಕೊಟ್ಟವನು ವಿದೂಷಕ, ನಾನಲ್ಲ. ನನಗೇಕೆ ಶಿಕ್ಷೆ?" ಎಂದು ಕೇಳಿದನು ಧರ್ಮದತ್ತ.

ಸುಮಂತ್ರನು ಧರ್ಮದತ್ತನನ್ನು ಭಾವೀ ಮಂತ್ರಿಯನ್ನಾಗಿ ಆರಿಸಿಕೊಂಡನು.





# ತಾಳ್ಮೆ

ಅನೇಕ ವರ್ಷಗಳ ಹಿಂದೆ ರಾಘವಯ್ಯನೆಂಬ ಜಮೀನ್ದಾರನಿದ್ದನು. ಅವನ ಹತ್ತಿರ ಚಂದ್ರಯ್ಯನೆಂಬ ಹುಡುಗನೊಬ್ಬ ಹೊಸದಾಗಿ ಚಾಕರಿ ಕೆಲಸಕ್ಕೆ ಒಪ್ಪಿಕೊಂಡು ಸೇರಿದನು. ಕೆಲಸಕ್ಕೆ ಸೇರುವ ಮೊದಲೇ ಜಮೀನ್ದಾರ ರಾಘವಯ್ಯ ತುಂಬ ಮುಂಗೋಪಿಯೆಂದೂ, ಕ್ರೂರ ಸ್ವಭಾವದವನೆಂದೂ ಅವನಿಗೆ ಗೊತ್ತಿತ್ತು. ಅಂಥವರಲ್ಲಿ ಕೆಲಸ ಮಾಡಿ ಗೆದ್ದರೇನೇ ಎಂಥವರಲ್ಲಿಯೂ ಕೆಲಸಮಾಡಬಹುದೆಂದು ಗಟ್ಟಿಮಾಡಿಕೊಂಡೇ ಬಂದಿದ್ದನು.

ಚಂದ್ರಯ್ಯ ಕೆಲಸಕ್ಕೆ ಸೇರಿದಂದಿನಿಂದಲೇ ರಾಘವಯ್ಯ ಅವನ ಮೇಲೆ ಹಾರಿ ಬೀಳಲು ಪ್ರಾರಂಭ ಮಾಡಿದನು. ಅವನೇನು ಮಾಡಿದರೂ ತಪ್ಪು ಹೇಳಿ ಮತ್ತೆ ಮಾಡಿಸುವನು. ಚಂದ್ರಯ್ಯ ಕುಳಿತು ಊಟ ಮಾಡಲಿಕ್ಕೂ ನಿಧಾನವಾಗಿ ನೀರು ಕುಡಿಯಲಿಕ್ಕೂ, ಬಿಡುತ್ತಿದ್ದಿಲ್ಲ. ಅರ್ಧ ಊಟ ಮಾಡುವಾಗಲೂ ಏನೋ ಒಂದು ಕೆಲಸಕ್ಕೆ ಕರೆಯುತ್ತಿದ್ದನು. ಚಂದ್ರಯ್ಯ ನಗುತ್ತ ಅರ್ಧ ಊಟವನ್ನು ಮುಚ್ಚಿಟ್ಟು ಕೆಲಸಕ್ಕೆ ಓಡುವನು. ಅರ್ಧರಾತ್ರಿಯ ಹೊತ್ತಿನಲ್ಲಿ ಕೂಡಾ ರಾಘವಯ್ಯ ಚಂದ್ರಯ್ಯನನ್ನು ಎಬ್ಬಿಸಿ ಏನೋ ಒಂದು ಕೆಲಸ ಹೇಳುತ್ತಿದ್ದನು. ಚಂದ್ರಯ್ಯ ನಗುತ್ತಾ ಎದ್ದು ಹೋಗಿ ಆ ಕೆಲಸ ಮಾಡುತ್ತಿದ್ದನು.

ಹಟ್ಟಿಯಲ್ಲಿ ಎಮ್ಮೆಗಳು ಸರಿಯಾಗಿ ಹಾಲು ಹಿಂಡದೆ ಹೋದರೆ ರಾಘವಯ್ಯ ಚಂದ್ರಯ್ಯನನ್ನು ಬಯ್ಯುತ್ತಿದ್ದನು. ಅವುಗಳಿಗೆ ಚಂದ್ರಯ್ಯ ಸರಿಯಾಗಿ ಹುಲ್ಲು ಹಾಕಲಿಲ್ಲವೆಂದು. ಒಂದು ಸಾರಿ ಗದ್ದೆಯಲ್ಲಿ ಒಂದು ಮೂಲೆಯಲ್ಲಿ ಬೆಳೆಯ ಸಸಿಗಳು ಬಾಡಿ ಹೋದುದನ್ನು ನೋಡಿ ರಾಘವಯ್ಯ ಅರ್ಥವೇನಿಲ್ಲದೆ ಚಂದ್ರಯ್ಯನನ್ನೇ ಬಯ್ದು ಬೆನ್ನಿಗೆ ನಾಲ್ಕೇಟು ಕೂಡಾ ಹೊಡೆದನು. ಈ ರೀತಿಯಾಗಿ ರಾಘವಯ್ಯ ಎಷ್ಟೇ ಕಾಟ ಕೊಟ್ಟರೂ ಚಂದ್ರಯ್ಯ ನಗುತ್ತಾ ತಾಳಿಕೊಳ್ಳುತ್ತಿದ್ದನೇ ಹೊರತು. ಯಜಮಾನನ ಮೇಲೆ ಸ್ವಲ್ಪವೂ ತಿರಸ್ಕಾರ ತೋರಿಸಲಿಲ್ಲ. ಈ ರೀತಿಯಾಗಿ ಚಂದ್ರಯ್ಯ ಏಕೆ ತಾಳಿಕೊಳ್ಳುತ್ತಿದ್ದಾನೆಂದು ರಾಘವಯ್ಯ ಆಲೋಚಿಸಲೂ ಇಲ್ಲ. ಜಮೀನ್ದಾರನಾಗಿ ಹುಟ್ಟಿದ ತಾನು ಆಳುಗಳ ಮೇಲೆ ಅಧಿಕಾರ ತೋರಿಸಬೇಕಾದ್ದೇ ಕರ್ತವ್ಯವೆಂದುಕೊಂಡಿದ್ದನು.

ಆದರೆ ರಾಘವಯ್ಯನು ಚಂದ್ರಯ್ಯನಿಗೆ ಕೊಡುವ ಕಷ್ಟಗಳನ್ನು ನೋಡಿ ಸಂಕಟಪಡುತ್ತಿದ್ದವಳು ರಾಘ

ಜಿ. ನರಸಿಂಹಮೂರ್ತಿ

ವಯ್ಯನ ಹೆಂಡತಿಯೇ. ಅಂತಹ ರಾಕ್ಷಸನೊಂದಿಗೆ ಅವಳು ಸಂಸಾರ ಸಾಗಿಸಿಕೊಂಡು ಬರುತ್ತಿದ್ದಾಳೆ. ಹೆಂಡತಿಯಾದ ಮೇಲೆ ಅವಳು ಅನುಭವಿಸದೆ ವಿಧಿ ಇಥಲಿಲ್ಲ. ಸಾಧಾರಣವಾಗಿ ಕೆಲಸದಾಳುಗಳು ರಾಘವಯ್ಯನೊಂದಿಗೆ ಸಾಧ್ಯವಾದಷ್ಟರ ಮಟ್ಟಿಗೆ ಕೆಲಸ ಮಾಡಿ, ಸಂಬಳದ ಹಣ ಸಿಕ್ಕಿದ ಕೂಡಲೇ ದೊಡ್ಡ ನಮಸ್ಕಾರ ಮಾಡಿ ಹೊರಟುಹೋಗಿ ಬಿಡುತ್ತಿದ್ದರು. ಚಂದ್ರಯ್ಯನೂ ಹಾಗೆಯೇ ಮಾಡುವ ನೆಂದು ಅವಳು ಅಂದುಕೊಂಡಳು. ಆದರೆ ಚಂದ್ರಯ್ಯ ಹೊರಟುಹೋಗುವ ಪ್ರಸಕ್ತಿಯೇ ಎತ್ತಲಿಲ್ಲ. ಚಂದ್ರಯ್ಯ ಉತ್ಸಾಹದಿಂದ ಮನೆ ಕೆಲಸಗಳನ್ನು ಮಾತ್ರವಲ್ಲದೆ ಹೊಲದ ಕೆಲಸಗಳನ್ನು ಸಹಾ ಮಾಡ ತೊಡಗಿದನು. ಕೆಲಸದ ಮೇಲೆ ಅವನಿಗಿರುವ ಶ್ರದ್ಧೆಯನ್ನೂ, ಕೆಲಸದ ಜಾಣತನವನ್ನೂ ನೋಡಿದ ವರಿಗೆ ರಾಘವಯ್ಯ ಅವನನ್ನು ಹಾಗೇಕೆ ಬಯ್ದು ಕಾಡುವನೋ ಅನಿಸುತ್ತಿತ್ತು.

ಚಂದ್ರಯ್ಯನ ತಾಳ್ಮೆಯನ್ನು ನೋಡಿ ನೋಡಿ ರಾಘವಯ್ಯನ ಹೆಂಡತಿ ಒಂದು ದಿನ ಅವನನ್ನು ಗುಟ್ಟಾಗಿ ಕರೆದು, "ಎಲೋ, ನಿನ್ನಂಥ ಒಳ್ಳೇ ಹುಡುಗನನ್ನು ಯಜಮಾನರು ಹೀಗೆ ಬಯ್ದು ಸಾಧಿಸೋದನ್ನು ನೋಡಲಾಗೋದಿಲ್ಲಪ್ಪ. ನೀನಾ ದರೂ ಅಷ್ಟೇಕೆ ಸಹಿಸಬೇಕು ? ನಿನಗೆ ಸಂಬಳದ ಮೇಲೆ ಸ್ವಲ್ಪ ಹಣ ಪ್ರತ್ಯೇಕವಾಗಿ ಕೊಡುತ್ತೇನೆ. ಎಲ್ಲಿಗಾದರೂ ಹೋಗಿ ಚೆಂದಾಗಿರಪ್ಪ" ಎಂದಳು.

"ಇದೇನು ಹೇಳುವಿರಿ ಅಮ್ಮಾವರೆ ? ನೀವು ನನಗೆ ತಾಯಿಯ ಹಾಗೆ. ಯಜಮಾನರು ತಂದೆ ಹಾಗೆ. ನನ್ನನ್ನು ಎಷ್ಟು ಬೈದರೂ ಅವರಿಗೆ ನನ್ನ ಮೇಲೆ ಪ್ರೀತಿಯಿದ್ದೇ ಇದೆ. ನನ್ನ ಮೇಲೆ ಅವರಿಗೆ ಕೋಪ ವೇನಿಲ್ಲಮ್ಮಾ. ಅವರ ಗುಣವೇ ಹಾಗೆ. ನಿಜಕ್ಕೂ ನಾನು ನಿಮ್ಮ ಮಗನಾದರೆ ಎಲ್ಲಾ ಸೈಸಿಕೊಂಡಿರ ಬೇಕೋ ಬೇಡವೋ ? ನಿಮ್ಮನ್ನು ಸಹಾ ಅವರು ಬಯ್ಯುವರೋ ಇಲ್ಲವೋ ? ಹಾಗೇ ನನ್ನನ್ನೂ ಬಯ್ದರೆ ಹೊಡದರೆ ಅಪ್ಪಾ ಅಂತಲೇ ಅಂದು ಕೊಳ್ಳೇನೆ" ಎಂದ ಚಂದ್ರಯ್ಯ.

ಈ ಮಾತನ್ನು ಮರೆಯಲ್ಲಿ ನಿಂತಿದ್ದ ರಾಘವಯ್ಯನು ಕೇಳಿಬಿಟ್ಟನು. ಅವನನ್ನು ಯಾರೋ ಶೂಲದಿಂದ ತಿವಿದಂತಾಯಿತು. ತನ್ನ ಮಗನು ಕೂಡಾ ತನ್ನ ಮೇಲೆ ತೋರಿಸದಂಥ ವಿಶ್ವಾಸವನ್ನು ಚಂದ್ರಯ್ಯ ತೋರಿಸಿದ್ದಾನೆ. ಆ ಕ್ಷಣದಿಂದ ರಾಘವಯ್ಯ ಚಂದ್ರಯ್ಯ ನನ್ನು ತನ್ನ ಮಗನ ಹಾಗೇ ನೋಡತೊಡಗಿದನು. ಅವನ ಮುಂಗೋಪವೂ ಅಡಗಿತು. ಎಲ್ಲರೊಂದಿಗೆ ಮುಗುಳುನಗು ತೊಡಗಿ, ಕ್ರಮೇಣ ದೊಡ್ಡ ನಗು ಗಳೆದ್ದುವು. ಅವನ ಹೆಂಡತಿಗೂ ಸಂತೋಷ ವಾಯಿತು.





# ನಂಬುಗಸ್ತ

ಒಂದು ಊರಿನಲ್ಲಿ ಚಂದ್ರಶೇಖರನೆಂಬವನು ಒಂದು ಅಂಗಡಿಯನ್ನಿಟ್ಟುಕೊಂಡಿದ್ದನು. ಅವನಿಗೆ ಕೆಲವು ಮೇಕೆಗಳೂ ಇದ್ದುವು. ಮೇಕೆಗಳನ್ನು ಕಾಯಲಿಕ್ಕೆ ಒಬ್ಬ ಹುಡುಗನು ಬೇಕೆಂದು ಹುಡುಕಿಕೊಂಡಿದ್ದನು. ಆಗ ಅವನ ಸ್ನೇಹಿತ ರಾಮದಾಸನು ಗೋಪಿ ಎಂಬ ಹುಡುಗನನ್ನು ಕಳುಹಿಸಿ, ಅವನು ಒಳ್ಳೆಯ ನಂಬುಗಸ್ತನೆಂದು ಶಿಫಾರಸು ಮಾಡಿದ್ದನು. ಕೆಲಸಕ್ಕೆ ಸೇರಿದ ಗೋಪಿ ಮೇಕೆಗಳನ್ನು ಮೇಯಿಸಿಕೊಂಡು ಬರಲು ಹೋಗಿದ್ದನು.

ಸಾಯಂಕಾಲದಲ್ಲಿ ಚಂದ್ರಶೇಖರನು ಅಂಗಡಿಯಲ್ಲಿ ಕುಳಿತಿದ್ದಾಗ, ಅವನ ಹೆಂಡತಿ ಲಕ್ಷ್ಮಿ ಬಂದು, "ಏನೂಂದ್ರೆ, ಇನ್ನೂ ನಮ್ಮ ಮೇಕೆಗಳು ತಿರುಗಿ ಬರಲಿಲ್ಲವಲ್ಲ? ಹೊಸ ಕೆಲಸದಾಳನ್ನು ನಂಬಿ ಮೇಕೆಗಳನ್ನು ಕಳುಹಿಸಿದ್ದೇವೆ. ಅವನೆಂಥವನೋ? ಮೇಕೆಗಳು ಮನೆಗೆ ಬಾರದಿದ್ದರೆ ನಾವೇನು ಮಾಡುವುದು?" ಎಂದಳು.

ಚಂದ್ರಶೇಖರನು ಲೆಕ್ಕ ಮಾಡಿದ ಹಣದ ಚೀಲವನ್ನು ಪೆಟ್ಟಿಗೆಯಲ್ಲಿಡುತ್ತ, "ಬಂದಾನು, ಬಂದಾನು. ಹುಡುಗ ನಂಬುಗೆಯವನಲ್ಲದಿದ್ದರೆ ಸ್ನೇಹಿತ ರಾಮದಾಸ ಅವನನ್ನು ಕಳುಹಿಸುತ್ತಿದ್ದನೆ? ಇನ್ನೂ ವೇಳೆಯಿದೆ. ಹೋಗಿ ನಿನ್ನ ಕೆಲಸ ನೋಡಿಕೋ" ಎಂದನು ಹೆಂಡತಿಗೆ.

ಆದರೆ ಅವನ ಮನಸ್ಸಿನಲ್ಲಿ ಭಯವೂ ಸಂದೇಹವೂ ಏಳದೆ ಬಿಡಲಿಲ್ಲ. ಹೆಂಡತಿ ಹೇಳಿದಂತೆ ಈ ಕೆಲಸದ ಹುಡುಗ ಮೇಕೆಗಳೊಂದಿಗೆ ಎತ್ತಾದರೂ ಓಡಿಹೋದರೆ ತಾನೇನು ಮಾಡಲೂ ಸಾಧ್ಯವಿಲ್ಲ. ರಾಮದಾಸನ ಮೇಲೆ ತಪ್ಪು ಹಾಕಲೂ ಬಾರದು.

ಚಂದ್ರಶೇಖರನು ಅಂಗಡಿಯಿಂದ ಮನೆಗೆ ಬಂದಾಗ, ಗೋಪಿ ಮೇಕೆಗಳನ್ನು ಸಾಗಿಸಿಕೊಂಡು ಮನೆಗೆ ಬಂದೇ ಬಂದನು. ಅವನನ್ನು ನೋಡಿದ ಮೇಲೆ ಚಂದ್ರಶೇಖರನಿಗೂ ಲಕ್ಷ್ಮಿಗೂ ನೆಮ್ಮದಿಯಾಯಿತು.

ಹುಡುಗ ಗೋಪಿಯ ಮುಖದಲ್ಲಿ ಮಾಯೆ ಮೋಸಗಳ ಛಾಯೆ ಸ್ವಲ್ಪವೂ ಇರಲಿಲ್ಲ. ಸರಳ ಸ್ವಭಾವದ ಮುಗ್ಧನಂತೆಯೇ ಕಾಣುತ್ತಿದ್ದಾನೆ. ಆದರೂ ಯಾವುದಕ್ಕೂ ಒಳ್ಳೆಯದೆಂದುಕೊಂಡು ಅವನನ್ನು ಪರೀಕ್ಷಿಸಲು ನಿಶ್ಚಯಿಸಿದನು ಚಂದ್ರಶೇಖರ. ಎರಡು ಮೂರು ದಿನಗಳವರೆಗೆ ಗೋಪಿಯ

ಜಿ. ವಿಜಯ

ಕಣ್ಣಿಗೆ ಬೀಳುವಂತೆ ಮನೆಯೊಳಗೆ ಅಲ್ಲಿ ಇಲ್ಲಿ ಚಿಲ್ಲರೆ ನಾಣ್ಯಗಳನ್ನು ಹಾಕಿದನು. ಗೋಪಿ ಕಸಬಳಿಯುವಾಗ ಅವುಗಳಲ್ಲಿ ಒಂದು ಚಿಕ್ಕಾಸನ್ನೂ ಇಟ್ಟುಕೊಳ್ಳದೆ ಎಲ್ಲವನ್ನೂ ತಂದು ಚಂದ್ರಶೇಖರನಿಗೆ ಕೊಟ್ಟನು. ಅದರಿಂದ ಗೋಪಿಯ ಮೇಲೆ ಸ್ವಲ್ಪ ನಂಬುಗೆ ಕೂಡಿತು.

"ಗೋಪಿಯ ಮೇಲೆ ಸುಮ್ಮ ಸುಮ್ಮನೆ ಅನುಮಾನಪಡಬಾರದು. ನಿಜಕ್ಕೂ ಅವನು ಪ್ರಾಮಾಣಿಕನು" ಎಂದು ಚಂದ್ರಶೇಖರನು ತನ್ನ ಮನಸ್ಸಿನಲ್ಲಿ ಖಚಿತ ಮಾಡಿಕೊಂಡು, ಹೆಂಡತಿಯೊಂದಿಗೆ ಅದನ್ನೇ ಹೇಳಿದನು.

"ಹೌದು ಹೌದು. ಮೊದಲು ಎಲ್ಲರೂ ನಂಬುಗಸ್ಥರಾಗಿಯೇ ಇರುತ್ತಾರೆ. ನಾಲ್ಕು ದಿನ ಹೋದರೆ ನಿಜ ಬಣ್ಣ ಬಯಲಾಗುತ್ತೆ" ಎಂದಳು ಹೆಂಡತಿ ಗಂಡನೊಂದಿಗೆ.

ಹಾಗಾದರೆ ದೊಡ್ಡದೊಂದು ಪರೀಕ್ಷೆ ಇಟ್ಟುಬಿಡೋಣವೆಂದುಕೊಂಡು ಚಂದ್ರಶೇಖರ ತನ್ನ ಸ್ನೇಹಿತನಾದ ಅಹಮದ್ ಎಂಬವನೊಂದಿಗೆ ಮಾತಾಡಿ, ಅವನಿಗೆ ಹಣ ಕೊಟ್ಟು ಅವನ ಕಿವಿಯಲ್ಲಿ ಏನೋ ಹೇಳಿ ಕಳುಹಿಸಿದನು.

ಅಹಮ್ಮದನು ಕಾಡಿನ ಹತ್ತಿರ ಮೇಕೆಗಳನ್ನು ಕಾಯುತ್ತಿದ್ದ ಗೋಪಿಯ ಹತ್ತಿರ ಹೋಗಿ, "ಹುಡುಗಾ, ಹತ್ತು ರೂಪಾಯಿ ಕೊಡುತ್ತೇನೆ, ನನಗೊಂದು ಮೇಕೆ ಕೊಡುವಿಯಾ?" ಎಂದು ಕೇಳಿದನು.

"ಅಯ್ಯಾ ಇವು ನನ್ನ ಮೇಕೆಗಳಲ್ಲ, ಮನೆಗೆ ಬಂದು ಯಜಮಾನರ ಹತ್ತಿರ ಕೇಳಿ ತೆಗೆದುಕೊಳ್ಳಿ" ಎಂದನು ಗೋಪಿ.

ಅಹಮ್ಮದನು ಬಿಡಲಿಲ್ಲ. ಚೌಕಾಸಿಗಿಳಿದು ಬೆಲೆ ಹೆಚ್ಚಿಸುತ್ತ ಕಡೆಗೆ ಒಂದು ಮೇಕೆಗೆ ನೂರು ರೂಪಾಯಿ ಕೊಡುತ್ತೇನೆಂದನು. ಗೋಪಿ ಸ್ವಲ್ಪ ಆಲೋಚಿಸಿ. "ಸರಿ, ಕೊಡಿರಿ" ಎಂದು ನೂರು ರೂಪಾಯಿ ತೆಗೆದುಕೊಂಡು ಒಂದು ಮೇಕೆಯನ್ನು ಅವರಿಗೆ ಕೊಟ್ಟನು.

ಸಾಯಂಕಾಲ ಗೋಪಿ ಮೇಕೆಗಳನ್ನು ಮನೆಗೆ ತಂದು, ಕೂಡಲೇ ಚಂದ್ರಶೇಖರನ ಬಳಿಗೆ ಹೋಗಿ, "ಅಯ್ಯಾ, ಬುದ್ಧಿಯಿಲ್ಲದ ಸಾಹೇಬನೊಬ್ಬ ನೂರು ರೂಪಾಯಿ ಕೊಟ್ಟು ನಮ್ಮದೊಂದು ಮೇಕೆ ಕೊಂಡುಕೊಂಡ. ಇಕ್ಕೊಳ್ಳಿ ಆ ಹಣ. ಇದರಿಂದ ನಮಗೆ ಮೂರು ಮೇಕೆಗಳನ್ನು ಕೊಂಡುಕೊಳ್ಳಬಹುದಷ್ಟೇ, ಅಂತ ಕೊಟ್ಟುಬಿಟ್ಟೆ" ಎಂದನು.

"ಒಳ್ಳೇ ಕೆಲಸ ಮಾಡಿದೆ!" ಎಂದು ಚಂದ್ರಶೇಖರ ಹೊಗಳಿದ. ಆ ಮೇಲೆ ಲಕ್ಷ್ಮೀಚಂದ್ರಶೇಖರರು ಗೋಪಿಯನ್ನು ಎಂದೂ ಅನುಮಾನಿಸಲಿಲ್ಲ. ಪರೀಕ್ಷಿಸಲೂ ಇಲ್ಲ.



# ದೇವರಿಗೇ ಮೋಸ!

**ಒಂ**ದು ಊರಿನಲ್ಲಿ ಹಣದ ಮೇಲೆ ತುಂಬಾ ಪ್ರೀತಿಯಿರುವ ವೀರಣ್ಣನೆಂಬ ವ್ಯಾಪಾರದವನಿದ್ದನು.

ಅವನು ದಿನಾ ಅಂಗಡಿ ಮುಚ್ಚುವಾಗ ಹಣವನ್ನೆಲ್ಲಾ ಪೆಟ್ಟಿಗೆಯೊಳಗಿಟ್ಟು, ಇಟ್ಟ ಹಣ ಕಡಿಮೆಯಾಗ ದಂತಿರಲು ಏನು ಮಾಡುವುದೆಂದು ತುಂಬಾ ಯೋಚಿಸಿ, ಅದರಲ್ಲಿರುವ ಹಣವನ್ನು ಯಾರೂ ತೆಗೆಯದಿದ್ದರೆ ದೇವರಿಗೆ ಒಂದು ತೆಂಗಿನಕಾಯಿ ಒಡೆಯುತ್ತೇನೆಂದು ಹರಕೆ ಹೊತ್ತನು.

ಹೀಗೆ ಒಂದು ತಿಂಗಳು ಕಳೆದರೂ ವೀರಣ್ಣ ದೇವರಿಗೆ ತೆಂಗಿನಕಾಯಿ ಒಡೆಯಲೇ ಇಲ್ಲ. ಆಗ ದೇವರು ವೀರಯ್ಯನ ಸ್ವಪ್ನದಲ್ಲಿ ಬಂದು, "ಇಷ್ಟು ದಿನಗಳಿಂದ ನಿನ್ನ ಹಣವನ್ನು ಎಚ್ಚರಿಕೆಯಿಂದ ನೋಡಿ ಕೊಳ್ಳುತ್ತಾ ಇದ್ದೇನೆ, ನೀನು ನನಗೆ ತೆಂಗಿನಕಾಯಿ ಒಡೆಯಲೇ ಇಲ್ಲವೇಕೆ? ಎಷ್ಟುದಿನ ಕಾಯಬೇಕು?" ಎಂದು ಕೇಳಿದನು.

"ಹೇಗೆ ಒಡೆಯಲಿ ದೇವರೇ? ತೆಂಗಿನಕಾಯಿ ಒಡೀಲಿಕ್ಕೆ ಅದನ್ನು ಕೊಂಡುಕೊಳ್ಳ ಬೇಕು. ಕೊಂಡು ಕೊಳ್ಳಲಿಕ್ಕೆ ಈ ಪೆಟ್ಟಿಗೆಯ ಹಣವನ್ನೇ ತೆಗೀಬೇಕು. ಈ ಪೆಟ್ಟಿಗೆಯ ಹಣ ಕಡಿಮೆಯಾಗದಿರಲಿಕ್ಕೆ ತಾನೇ ತೆಂಗಿನಕಾಯಿ ಒಡೆಯುತ್ತೇನೆಂದೆ? ಬೇರೆ ಎಲ್ಲಿಯೂ ನಾನು ಹಣ ಇಟ್ಟುಕೊಳ್ಳುವುದಿಲ್ಲ. ಏನು ಮಾಡಲಿ ಹೇಳಿ ದೇವರೇ?" ಎಂದ ವೀರಣ್ಣ.

ಅವನ ಮಾತು ಕೇಳಿ ದೇವರು ಆಶ್ಚರ್ಯದಿಂದ ಅದೃಶ್ಯನಾದನು. "ದೇವರಿಗಾದರೂ ನನ್ನ ಮುಂದೆ ಪ್ರತ್ಯಕ್ಷ ಬಂದು ಕೇಳುವಷ್ಟು ಆಶೆ ಏಕೋ?" ಎಂದುಕೊಂಡನು ವೀರಣ್ಣ.





# ಯಾವುದು ಧೈರ್ಯ?

ಒಂದು ಊರಿನಲ್ಲಿ ಚಂಪಾ ಎಂಬ ಹುಡುಗಿ ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದು ಕೊಂಡವಳು. ಆದುದರಿಂದ ತಂದೆ ಅವಳನ್ನು ಮಿತಿಮೀರಿ ಅಚ್ಚೆ ಮಾಡಿ ಬೆಳೆಸಿದುದರ ಫಲವೆಂಬಂತೆ, ಅವಳು ಸ್ವೇಚ್ಛೆಯಾಗಿ ಗಂಡುಗುಣದಿಂದಲೇ ಬೆಳೆದಳು. ಗಂಡುಸರಿಗಿಂತ ತಾನೇನೂ ಕಡಿಮೆಯಲ್ಲ ಎಂಬಭಾವದಿಂದ ಮೊಂಡು ಧೈರ್ಯವನ್ನು ಮೈಗೂಡಿಸಿಕೊಂಡಳು. ಎಲ್ಲಿರೊಡನೆಯೂ ನಿರ್ಲಕ್ಷ್ಯವಾಗಿ ಪ್ರವರ್ತಿಸುವಳು. ಸಾಹಸಕಾರ್ಯಗಳಿಗೆ ತಲೆ ತೂರಿಸುವಳು. ಒಬ್ಬಳೇ ಕತ್ತಲೆಯಲ್ಲಿ ಹೋಗುವಳು, ಬರುವಳು. ಗಾಳಿ ಬರುವುದಿಲ್ಲವೆಂದುಕೊಂಡು ಹೆಬ್ಬಾಗಿಲು ತೆರೆದಿಟ್ಟೇ ಮಲಗುವಳು. ಊರ ಕೊನೆಯಲ್ಲಿರುವ ಗುಡಿಗೆ ಹೋಗಿ ಕತ್ತಲೆಯಾದ ಮೇಲೆ ಹಿಂದಿರುಗಿ ಬರುವಳು. ಯಾರನ್ನೂ ಗಣನೆಗೆ ತೆಗೆದುಕೊಳ್ಳದೆ, ಎಂಥವರೊಂದಿಗಾದರೂ ಮಾತಾಡುವಳು.

ಹೀಗೆ ಬೆಳೆಯುತ್ತ ಬಂದ ಚಂಪಳಿಗೆ ಮದುವೆ ಮಾಡಬೇಕಾದ ವಯಸ್ಸು ಬಂದಾಗ ಅವಳ ತಂದೆ ರಾಜಣ್ಣನಿಗೆ, ಅವಳ ಪ್ರವರ್ತನೆ ಒಂದು ಸಮಸ್ಯೆಯಾಗಿ ಕಾಡ ತೊಡಗಿತು. ಅವಳು ತೋರಿಸುವ ದುಸ್ಸಾಹಸವು ಅಪಾಯಕಾರಿಯಾದುದೆಂದು ಅವನು ಎಷ್ಟೋ ಬಾರಿ ಹೇಳಿ ನೋಡಿದ್ದನು. ಚಂಪೆ ನಕ್ಕು ತಂದೆಯಮಾತನ್ನು ಹಾರಿಸಿ ಬಿಡುತ್ತಿದ್ದಳು.

ಆದರೂ ತಂದೆಗೆ ಸುಮ್ಮನಿರಲು ಸಾಧ್ಯವಿಲ್ಲವಷ್ಟೆ? ಒಂದು ದಿನ ಅವನು ಮಗಳಿಗೆ ವರಾನ್ವೇಷಣೆ ಮಾಡಲು ಬೇರೆ ಊರಿಗೆ ಹೊರಡುತ್ತ, "ಅಮ್ಮಾ, ರಾತ್ರಿ ಮನೆ ಜಾಗ್ರತೆ! ಮನೆಯಲ್ಲಿ ನೀನೊಬ್ಬಳೇ ಇರಬೇಕಾದೀತು!" ಎಂದು ಎಚ್ಚರಿಗೆ ಹೇಳಿದನು.

"ಅಪ್ಪಾ, ನನಗೆ ಮಾತುಮಾತಿಗೂ ಏತಕ್ಕೆ ಹೀಗೆ ಪುಕ್ಕಲು ಮದ್ದು ಕುಡಿಸುವಿರಿ? ಏನೂ ಭಯವಿಲ್ಲ. ಸಹಾಯಕ್ಕೋ ಜತೆಗೋ ಯಾರೂ ಬೇಡ! ರಾತ್ರಿಯಲ್ಲಿ ನಾನೊಬ್ಬಳೇ ಇರುತ್ತೇನೆ. ನೀವು ನಿಶ್ಚಿಂತೆಯಾಗಿ ಹೋಗಿ ಬನ್ನಿ." ಎಂದಳು.

ಯಾವುದಕ್ಕೂ ಒಳ್ಳೆಯದೆಂದು ರಾಜಣ್ಣನು ಮನೆಯೊಳಗಿದ್ದ ಹಣವನ್ನೂ, ನಗಗಳನ್ನೂ ಒಂದು ಬಟ್ಟೆಯಲ್ಲಿ ಸುತ್ತಿ ಕುತ್ತಟ್ಟದ ಸಂಡಿಗೆ ಡಬ್ಬಿಯೊಳಗಿಟ್ಟು ಹೊರಟುಹೋದನು.

ತಂದೆಯ ಜಾಗರೂಕತೆಯ ಕೆಲಸಕ್ಕೆ ಹಾಸ್ಯ ಮಾಡುತ್ತ ಚಂಪೆ ಬಾಗಿಲು ಮುಚ್ಚಿಕೊಂಡಳು.

ಎಂ. ಕೆ. ಈಶ್ವರರಾವು

ಆಮೇಲೆ ಮನೆಗೆಲಸಗಳಲ್ಲಿ ಮಗ್ನಳಾದಳು. ರಾತ್ರಿಯಲ್ಲಿ ಊಟ ಮುಗಿಸಿ, ಜಗಲಿಯಲ್ಲಿ ಸ್ವಲ್ಪ ತಿರುಗಾಡಿ ಒಳಗೆ ಹೋಗಿ ಮಲಗಿಕೊಂಡಳು.

ಅವಳಿಗೆ ನಿದ್ದೆ ಹಿಡಿಸುತ್ತಾ ಇರುವಾಗ ಹಿಂದಿನ ಬಾಗಿಲನ್ನು ಯಾರೋ ತಟ್ಟಿದರು. ಆ ಶಬ್ದಕ್ಕೆ ಅವಳ ನಿದ್ದೆ ಹಾರಿಹೋಯಿತು. ಎದ್ದು ಹೋಗಿ ಬಾಗಿಲು ತೆರೆದಳು. ಹೊರಗೆ ಸುಮಾರು ಇಪ್ಪತ್ತೈದು ವಯಸ್ಸಿನ ಯುವಕ ನೊಬ್ಬ ನಿಂತಿದ್ದನು.

"ಯಾರು ನೀವು? ಏನು ಬೇಕು ನಿಮಗೆ?" ಎಂದು ಅವಳು ಅವನನ್ನು ಕೇಳಿದಳು. ಅದಕ್ಕೆ ಉತ್ತರವಾಗಿ ಅವನು ತಟಕ್ಕನೆ ಒಳಗೆಬಂದು, ಬಾಗಿಲು ಮುಚ್ಚಿ, ಕತ್ತಿಯೊಂದನ್ನು ತೆಗೆದು ಅವಳಿಗೆ ತೋರಿಸುತ್ತ "ಒಳ್ಳೇ ಮಾತಿನಲ್ಲಿ ಮನೆಯೊಳಗಿರುವ ಹಣವನ್ನೂ ನಗಗಳನ್ನೂ ಕೊಟ್ಟುಬಿಡು. ಹುಂ! ಬೇಗ!" ಎಂದನು ಕಣ್ಣು ತಿರುಗಿ ಸುತ್ತ.

ಈ ಆಕಸ್ಮಿಕಾಘಾತದಿಂದ ಚಂಪೆ ಸ್ತಬ್ಧಳಾದಳು. ಬಾಯಿಯಿಂದ ಮಾತೇ ಹೊರಡಲಿಲ್ಲ. ಕಳ್ಳ ಕತ್ತಿಯನ್ನು ಅವಳ ಎದೆಗೆ ಆನಿಸಿ, "ಮರದ ಹಾಗೆ ಮತ್ತೆನಿಲ್ಲು. ಮೊದಲು ಹೇಳಿದ್ದು ಮಾಡು!" ಎಂದು ಎಚ್ಚರಿಸಿದನು.

"ನಮ್ಮನೇಲಿ ಹಣ ಎಲ್ಲಿಯದು? ಇದ್ದ ಹಣವನ್ನೆಲ್ಲಾ ಯಾರಿಗೋ ಕೊಡಲು ಅಪ್ಪ ಒಯ್ದಿದ್ದಾರೆ. ಏನೂ ಇಲ್ಲ." ಎಂದು ಚಂಪೆ ಸಮಯ ಸ್ಫೂರ್ತಿ ತಂದುಕೊಂಡು ಹೇಳಿದಳು.

ಕಳ್ಳ ಅವಳ ಮಾತನ್ನು ನಂಬದೆ ಪೆಟ್ಟಿಗೆಗಳನ್ನೆಲ್ಲ ತೆರೆಯಿಸಿ ನೋಡಿದನು. ಎಲ್ಲಿಯೂ ಚಿಕ್ಕಾಸು ಕೂಡಾ ಇರಲಿಲ್ಲ, ತನ್ನ ತಂದೆಯ ಮುಂದಾಲೋಚನೆಯನ್ನು ಚಂಪೆ ಮನೆದೊಳಗೇ ಮೆಚ್ಚಿಕೊಂಡಳು.

ಕಳ್ಳನು ಕೋಪದಿಂದ ಚಂಪೆಯ ಕೊರಳಿನಲ್ಲಿದ್ದ ಅವಲಕ್ಕೀ ಸರವನ್ನು ಎಳೆದೆತ್ತಿಕೊಂಡು ಹಿಂದಿನ ಬಾಗಿಲನ್ನು ತೆರೆದು ಹೊರಗಿನಿಂದ ಮುಚ್ಚಿ ಓಡಿ ಹೋದನು. ಅವನು ಎತ್ತಿಕೊಂಡುಹೋದ ಸರವನ್ನು ರಾಜಣ್ಣ ಚಂಪಳಿಗಾಗಿ ಮಾಡಿಸಿದ್ದನು, ಅವಳ ಮದುವೆಗಾಗಿ. ಅದಕ್ಕೆ ಒಂದೂವರೆ ಸಾವಿರವಾಯಿ



ತಂತೆ. ಅದು ಕಳ್ಳನ ಪಾಲಿಗಾದುದನ್ನು ನೆನೆದು ಚಂಪೆ ತುಂಬಾ ಅತ್ತಳು. ತನ್ನ ಪೆದ್ದುತನವು ತನಗೆ ನಷ್ಟವನ್ನೇ ತಂದಿತಲ್ಲ!

ಮರುದಿನ ತಂದೆ ಬಂದ ಮೇಲೆ ಅವಳು ನಡೆದ ಸಂಗತಿಯನ್ನೆಲ್ಲಾ ತಂದೆಯೊಡನೆ ಹೇಳಿಕೊಂಡು ಅತ್ತಳು. ಅದನ್ನು ಕೇಳಿ ರಾಜಣ್ಣನೂ ದುಃಖಿಸುತ್ತ, "ಈಗ ಅತ್ತರೆ ಏನು ಲಾಭವಮ್ಮಾ? ಧೈರ್ಯ ವೆಂದರೆ ಬುದ್ಧಿ ಕಳೆದುಕೊಳ್ಳುವ ಕೆಲಸವಲ್ಲವೆಂದು ಗೊತ್ತಾಯಿತೆ? ರಾತ್ರಿಯ ಹೊತ್ತಿನಲ್ಲಿ ಯಾರೋ ಬಂದು ಬಾಗಿಲು ತಟ್ಟಿದರೆ, ಒಬ್ಬಳೇ ಇರುವ ಹೆಣ್ಣು ಬಾಗಿಲು ತೆರೆಯುವುದು ಧೈರ್ಯವೆನಿಸದು. ಅದು ಬುದ್ಧಿಗೇಡಿತನ. ಹಾಗೆಯೇ ಭಯಕ್ಕೂ ಜಾಗ ರೂಕತೆಗೂ ವ್ಯತ್ಯಾಸವಿದೆ. ಹಣವನ್ನು ಭದ್ರಪಡಿಸು ವುದು, ರಾತ್ರಿಯಲ್ಲಿ ಬಾಗಿಲುಗಳನ್ನು ಮುಚ್ಚಿಕೊಳ್ಳು ವುದು, ಕತ್ತಲೆಯಲ್ಲಿ ದೀಪ ಹಿಡಿಯುವುದು ಭಯ ಕ್ಕಾಗಿ ಅಲ್ಲ, ಜಾಗರೂಕತೆಗೆ. ಧೈರ್ಯವೆಂದರೆ, ಥಕ್ಕನೆ ಕಷ್ಟಬರುವಾಗ, ಎದೆಗೆಡದೆ ಅದನ್ನು ಇದಿರಿ ಸುವುದು." ಎಂದನು.

ಚಂಪೆಗೆ ಈ ಘಟನೆಯಿಂದ ಬುದ್ಧಿ ಬಂದಿತು. ತನ್ನ ಬುದ್ಧಿ ಹೀನತೆಯನ್ನೂ ಗಂಡು ಬೀರಿತನ ವನ್ನೂ ಬಿಟ್ಟಳು, ನಿಜವಾದ ಹೆಣ್ಣಾದಳು. ಇದು ನಡೆದ ಒಂದು ತಿಂಗಳಲ್ಲಿ ಅವಳ ಮದುವೆಗೆ ಒಂದು ಸಂಬಂಧವು ಕದುರಿತು. ಮದುಮಗನು ಚಂಪೆ ಯನ್ನು ಒಪ್ಪಿದನು. ಗಂಡಿನ ಕಡೆಯವರು ಅಲಂಕಾರ ವಾಗಿ ಅವಳ ಕೊರಳಿಗೆ ಒಂದು ಚಿನ್ನದ ಸರವನ್ನು ಹಾಕಿದರು. ಅದನ್ನು ನೋಡಿ ಚಂಪೆ ಬೆಚ್ಚಿಬಿದ್ದಳು. ಅದು ತನ್ನ ಕೊರಳಿನಿಂದ ಕಳ್ಳನು ಅಪಹರಿಸಿಕೊಂಡ ಅದೇ ಅವಲಕ್ಕಿ ಸರವೇ!

ಅವಳು ತಲೆಯೆತ್ತಿ ಮದುಮಗನನ್ನು ನೋಡಿ ದಳು. "ನನ್ನ ಕೊರಳಿನಿಂದ ಸರವನ್ನು ಎಳೆದು ಕೊಂಡ ಕಳ್ಳ ಇವನೇ! ನಾನು ಈ ಮದುವೆಗೆ ಒಪ್ಪ ಲಾರೆ!" ಎಂದು ಚಂಪೆ ತಂದೆಯೊಂದಿಗೆ ಆವೇಶ ದಿಂದ ಹೇಳಿದಳು.

ರಾಜಣ್ಣ ನಗುತ್ತ, "ಅದು ನನಗೂ ಗೊತ್ತು. ನೀನು ಮತ್ತೆ ನಿನ್ನ ಬುದ್ಧಿಗೇಡಿತನ ತೋರಿಸುವೆ ಯಲ್ಲವಮ್ಮಾ? ಸತ್ಯಾಸತ್ಯತೆಯನ್ನು ತಿಳಿಯದೆ ಮಾತು ಹೇಳಿಬಿಟ್ಟರೆ ಧೈರ್ಯವೆನಿಸಲಾರದು. ಅವನು ನಿನ್ನನ್ನು ಗುಡಿಯಲ್ಲಿ ಅನೇಕಸಾರಿ ನೋಡಿ ಮದುವೆ ಮಾಡಿಕೊಳ್ಳಬೇಕೆಂದುಕೊಂಡವನು. ಆದರೆ ನಿನ್ನಲ್ಲಿರುವ ಲೋಪವನ್ನು ತಿದ್ದಬೇಕೆಂತಲೇ ಈ ಕಳ್ಳ ನಾಟಕವಾಡಿದ್ದಾನೆ. ನೀನು ಈಗ ಸರಿಯಾಗಿರುವು ದನ್ನು ತಿಳಿದು ತನ್ನ ತಾಯಿಯನ್ನು ಒಪ್ಪಿಸಿ ಇಲ್ಲೀ ವರೆಗೆ ಬಂದಿದ್ದಾನೆ" ಎಂದನು. ಇದನ್ನು ಕೇಳಿ ಚಂಪೆ ನಾಚಿಕೆಯಿಂದ ತಲೆವಾಗಿದಳು.



# ಮನೆ ಸೇರಿದ ಶತ್ರು



ಸುಮೇರು ಪರ್ವತದಲ್ಲಿ ವಜ್ರನಾಭನೆಂಬ ದಾನವನು ಬ್ರಹ್ಮನನ್ನು ಕುರಿತು ತೀವ್ರ ತಪಸ್ಸು ಮಾಡಿ, ಕಡೆಗೆ ದೇವತೆಗಳಿಂದ ತನಗೆ ಸಾವು ಬಾರದಂತೆ ವರ ಪಡೆದನು.



ವಜ್ರನಾಭನು ದೇವತೆಗಳಿಗೆ ಅಜೇಯನಾದ ಹಾಗೆಯೇ ವಜ್ರಪುರವೆಂಬ ಅವನ ಕೋಟೆಯೂ ದುರ್ಭೇದ್ಯವಾದುದು. ಅದರೊಳಗೆ ಅವನ ಅನುಮತಿ ಇಲ್ಲದೆ ವಾಯುವೂ ನುಸುಳಲಾರ.



ವರಗರ್ವದಿಂದ ವಜ್ರನಾಭನು ಒಬ್ಬೊಬ್ಬ ರಾಜನನ್ನೂ ಯುದ್ಧದಲ್ಲಿ ಜಯಿಸಿ ಒಂದೊಂದು ರಾಜ್ಯವನ್ನೂ ನಿರ್ಮೂಲಮಾಡಿ, ಲೋಕದೊಳಗೆಲ್ಲಾ ಪ್ರಜೆಗಳ ಆಕ್ರಂದನವೇಳುವಂತೆ ಮಾಡಿದನು.



ಹೀಗೆ ಭೂಲೋಕವನ್ನೆಲ್ಲಾ ಜಯಿಸಿದಷ್ಟಕ್ಕೆ ತೃಪ್ತನಾಗದೆ ವಜ್ರನಾಭನು, ಸ್ವರ್ಗದ ಮೇಲೆ ದಂಡೆತ್ತಿ ಹೋದನು. ದೇವತೆಗಳ ಮೇಲೂ ಅವನಿಗೇನೂ ಭಯವಿಲ್ಲವಷ್ಟೆ ?



ತನ್ನೊಂದಿಗೆ ಯುದ್ಧಕ್ಕೆ ಬಾರೆಂದೂ, ಇಲ್ಲವೇ ತನಗೆ ಶರಣಾಗತನಾಗೆಂದೂ ವಜ್ರನಾಭನು ಇಂದ್ರನಿಗೆ ಸುದ್ದಿ ಕಳುಹಿಸಿದನು. ಏನು ಮಾಡುವುದೆಂದು ಇಂದ್ರನಿಗೆ ತೋರಲಿಲ್ಲ.



ದೇವತೆಗಳು ತಮ್ಮೊಳಗೆ ಮಾತಾಡಿಕೊಂಡು, ಯುದ್ಧದಲ್ಲಿ ತಾವು ಜಯಿಸಲು ಸಾಧ್ಯವಾಗದು ದರಿಂದ, ಆವನ ದುರ್ಗವನ್ನು ರಹಸ್ಯವಾಗಿ ಪ್ರವೇಶಿಸಿ ಧ್ವಂಸ ಮಾಡಬೇಕೆಂದುಕೊಂಡರು. ಆದರೆ ವಜ್ರಪುರಿ ದುರ್ಭೇದ್ಯವಾದುದಷ್ಟೆ?



ವಜ್ರನಾಭನನ್ನು ದೇವತೆಗಳು ಕೊಲ್ಲಲು ಸಾಧ್ಯವಿಲ್ಲದಿದ್ದರೂ ಮನುಷ್ಯರು ಕೊಲ್ಲಬಹುದು. ಆದಕ್ಕಾಗಿ ದ್ವಾರಕೆಯಲ್ಲಿರುವ ಕೃಷ್ಣನ ಮಗ ಪ್ರದ್ಯುಮ್ನನನ್ನು ಉಪಯೋಗಿಸಬಹುದೆಂದು ಇಂದ್ರನಿಗೆ ತೋರಿತು.



ವಜ್ರನಾಭನ ಮಗಳು ಪ್ರಭಾವತಿ ತುಂಬಾ ಸೌಂದರ್ಯವತಿ. ಮತ್ತು ಒಳ್ಳೆಯ ನೃತ್ಯಗಾತಿ. ವಜ್ರನಾಭನಿಗೆ ಮಗಳೆಂದರೆ ಪಂಚಪ್ರಾಣ.



ಒಂದು ದಿನ ಪ್ರಭಾವತಿ ಕ್ರೀಡಾ ಸರೋವರದ ಬಳಿಯಲ್ಲಿ ಕುಳಿತುಕೊಂಡಿರುವಾಗ, ಇಂದ್ರನು ಕಳುಹಿಸಿದ ಕೆಲವು ರಾಜ ಹಂಸಗಳು ಅವಳ ಸಮೀಪದಲ್ಲೇ ಎರಗಿದವು. ಅವುಗಳು ಪ್ರಭಾವತಿಯ ದೃಷ್ಟಿಯನ್ನು ಆಕರ್ಷಿಸಿದುವು.



ಆ ಹಂಸಗಳು ತಮ್ಮ ತಮ್ಮೊಳಗೆ "ಈ ಪ್ರಭಾವತಿ ಎಷ್ಟು ಚೆಂದ! ಇವಳಿಗೆ ದ್ವಾರಕೆಯಲ್ಲಿರುವ ಪ್ರದ್ಯುಮ್ನನೇ ತಕ್ಕ ಗಂಡ." ಎಂದು ಹೇಳಿಕೊಂಡುವು. ಆ ಮಾತುಗಳನ್ನು ಪ್ರಭಾವತಿ ಕೇಳಿಸಿಕೊಂಡಳು.

ಇಷ್ಟರಲ್ಲಿ ವಜ್ರನಾಭನು ತನ್ನ ಕುಮಾರಿಗೆ ನಾಟ್ಯಶಿಕ್ಷಣ ಕೊಡಿಸಲು ಜಗತ್ಪ್ರಸಿದ್ಧನಾದ ಭದ್ರನೆಂಬ ನಾಟ್ಯಾಚಾರ್ಯನನ್ನು ಕರೆಯಿಸಿದನು. ಭದ್ರನು ವಜ್ರಪುರಿಗೆ ಬರುವಾಗ ದೇವತೆಗಳು ಅವನನ್ನು ಅಪಹರಿಸಿಕೊಂಡು ಹೋದರು.





ದೇವತೆಗಳು ಭದ್ರನ ಹಳೆಯ ವಸ್ತ್ರಭೂಷಣ ಆಭರಣಗಳನ್ನೆಲ್ಲ ತೆಗೆದು. ಬೆಲೆ ಬಾಳುವ ದಿವ್ಯಾಭರಣಗಳನ್ನು ಕೊಟ್ಟು ಸುಮ್ಮನಾಗಿಸಿದರು. ಅವನ ವಸ್ತ್ರಾಭರಣಗಳನ್ನು ಪ್ರದ್ಯುಮ್ನನಿಗೆ ಧರಿಸಲು ಕೊಟ್ಟು ಅವನನ್ನು ಪ್ರಭಾವತಿಯ ಬಳಿಗೆ ಕಳುಹಿಸಿದರು.



ಭದ್ರನ ವೇಷದಲ್ಲಿ ಪ್ರದ್ಯುಮ್ನನು ವಜ್ರಪುರಿಯನ್ನು ಸೇರಿ ಪ್ರಭಾವತಿಯೊಂದಿಗೆ ತಾನು ಯಾರೆಂಬುದನ್ನು ಹೇಳಿದನು, ಪ್ರಭಾವತಿಗೆ ಪರಮಾನಂದವಾಯಿತು.



ಪ್ರಭಾವತೀ ಪ್ರದ್ಯುಮ್ನರು ರಹಸ್ಯವಾಗಿ ಗಾಂಧರ್ವ ವಿವಾಹ ಮಾಡಿಕೊಂಡರು. ಯಾವಾಗಲೂ ದಂಡಯಾತ್ರೆಯಲ್ಲಿರುವ ವಜ್ರನಾಭನಿಗೆ ಈ ಸಂಗತಿ ತಿಳಿಯದು. ಕಾಲಕ್ರಮದಲ್ಲಿ ಪ್ರಭಾವತಿ ಮಗನನ್ನು ಹಡೆದಳು.



ಪ್ರಭಾವತಿ ಪುತ್ರನನ್ನು ಹಡೆದಾಗಲೇ ವಜ್ರನಾಭನು ನಿಜವನ್ನು ತಿಳಿದು ಪ್ರದ್ಯುಮ್ನನೊಂದಿಗೆ ಯುದ್ಧಕ್ಕೆ ನಿಂತನು. ಕೃಷ್ಣನು ಕಳುಹಿಸಿದ ಚಕ್ರಾಯುಧದಿಂದ ಪ್ರದ್ಯುಮ್ನನು ವಜ್ರನಾಭನನ್ನು ಕೊಂದುಬಿಟ್ಟನು.



# ವಿಧಿವಿವಾಹ

ಸುಮಾರು ನಾನೂರು ವರ್ಷಗಳ ಹಿಂದೆ ಕಳಿಂಗ ರಾಷ್ಟ್ರವನ್ನು ಗಂಗವಂಶಕ್ಕೆ ಸೇರಿದ ಪುರುಷೋತ್ತಮನೆಂಬ ರಾಜನು ಪಾಲಿಸಿಕೊಂಡಿಸಿದ್ದನು. ಅವನ ಪರಿಪಾಲನೆ ಎಲ್ಲಾ ವಿಧದಲ್ಲಿಯೂ ಒಳ್ಳೆಯದಾಗಿದ್ದಿತೆಂದು ಪ್ರಸಿದ್ಧವಾಗಿತ್ತು.

ಎಲ್ಲಾ ರಾಜ ಮಹಾರಾಜರು ಕೂಡ ಅವನನ್ನು ಗೌರವದಿಂದ ನೋಡುತ್ತಿದ್ದರು. ಆದರೆ ಅವನು ಮದುವೆ ಮಾಡಿಕೊಂಡಿರಲಿಲ್ಲ. ತನಗೆ ತಕ್ಕವಳಾದ ಕನ್ಯೆ ದೊರಕುವವರೆಗೂ ಮದುವೆಯಾಗಲಾರೆನೆಂದು ಹಟಹಿಡಿದಿದ್ದನು.

ಆ ಕಾಲದಲ್ಲಿ ಕಾಂಚೀಪುರವನ್ನಾಳುವ ರಾಜನಿಗೆ ಒಬ್ಬಳು ಕುಮಾರಿ ಇದ್ದಳು. ಅವಳು ಲೋಕೈಕ ಸುಂದರಿ ಎನಿಸಿ, ಎಲ್ಲಾ ವಿಧದಲ್ಲಿಯೂ ಪುರುಷೋತ್ತಮನಿಗೆ ತಕ್ಕ ಕನ್ಯೆ ಎಂದು ವದಂತಿ ಹೊರಟಿತ್ತು. ಪುರುಷೋತ್ತಮನ ಭಕ್ತಿ ಶ್ರದ್ಧೆಗಳಿಗೂ ಕಂಚೀ ಕುಮಾರಿಯ ಭಕ್ತಿ ಶ್ರದ್ಧೆಗಳಿಗೂ ಹೋಲಿಕೆಯಿರುವುದಾಗಿ ಪುರುಷೋತ್ತಮನ ಕಿವಿಯವರೆಗೂ ಸುದ್ದಿ ಹೋಯಿತು. ಅವಳನ್ನೇಕೆ ನೋಡಬಾರದು? ಎಂದು ಪುರುಷೋತ್ತಮನ ತಂದೆ ಮಗನನ್ನು ಕೇಳಿದನು.

"ಆಗಲಿ, ನೋಡೋಣ" ಎಂದು ಪುರುಷೋತ್ತಮನು ಒಪ್ಪಿಗೆಕೊಟ್ಟನು. ಮಗನ ಅನುಮತಿಯಂ ಮೇರೆಗೆ ತಮ್ಮ ಪುರೋಹಿತನ ಮೂಲಕ ಕಂಚಿ ರಾಜನ ಬಳಿಗೆ ಮದುವೆಯ ರಾಯಭಾರವನ್ನು ಕಳುಹಿಸಿದನು. ಕನ್ಯಾರ್ಥಿಯಾಗಿಬಂದ ಪುರುಷೋತ್ತಮನ ಪುರೋಹಿತರಿಗೆ ಕಂಚಿರಾಜನು ಸಮಸ್ತ ಮರ್ಯಾದೆಗಳನ್ನೂ ಮಾಡಿ, ಬೇಕಾದ ಸಮಾಚಾರಗಳನ್ನೆಲ್ಲಾ ತಿಳಿದುಕೊಂಡನು. ತಮ್ಮ ಮಗಳಿಗೆ ಪುರುಷೋತ್ತಮನು ಸರಿ ಹೊಂದುತ್ತಾನೆಂದು ಅವರಿಗೂ ತೋರಿತು,

ಆದರಲ್ಲಿ ಸುಮುಖತೆ ಉಂಟಾದ ಮೇಲೆ ಮತ್ತೊಂದು ಶುಭದಿನದಲ್ಲಿ ವಧೂವರರ ನೋಡುವಿಕೆಯೂ ನಡೆಯಿತು. ವರನಾದ ಪುರುಷೋತ್ತಮನು ತೇಜಸ್ವಿಯಾದ ಯುವಕನೇ. ಅದಕ್ಕೆ ಜೋಡು ವಿದ್ಯಾವಂತನೂ, ಶಕ್ತಿ ಸಾಮರ್ಥ್ಯವುಳ್ಳವನೂ ಆಗಿದ್ದನು. ಜಾತಕವೂ ಕೂಡಿಕೊಂಡಿತ್ತು.

ಹೀಗೆಲ್ಲಾ ಸಂಬಂಧಕೂಡಿಬಂದುದು ಕಂಚಿರಾಜನಿಗೆ ಬಹಳ ಸಂತೋಷವಾಯಿತು. ಮದುವೆಯ ದಿನವನ್ನು ನಿಶ್ಚಯಿಸಿ ಸುದ್ದಿಕಳುಹಿಸುವುದಾಗಿ ಹೇಳಿದನು. ಪುರುಷೋತ್ತಮನಿಗೂ ಆ ಕನ್ಯೆ ತನಗೆ ತಕ್ಕವಳೆಂಬ



ನಂಬುಗೆಯುಂಟಾದುದರಿಂದ ಮದುವೆಯ ದಿನವನ್ನು ಇದಿರು ನೋಡಿಕೊಂಡಿದ್ದನು. ಅಷ್ಟರಲ್ಲಿ ಒಂದು ತಡೆ, ಭೂತಾಕಾರವಾಗಿ ಎದ್ದುಕೊಂಡಿತು.

ಇಷ್ಟರವರೆಗೆ ನಿಶ್ಚಯವಾಗಿರುವಾಗ, ಆಗದವರಾರೋ ಕಂಚೀ ರಾಜನ ಮನಸ್ಸಿಗೆ ಪುರುಷೋತ್ತಮನ ವಿಷಯವಾಗಿ ಒಂದು ಕಳಂಕವನ್ನು ಎಬ್ಬಿಸಿದರು. ಗಂಗರು ಹಿಂದೆ ಒಂದು ಕಾಲದಲ್ಲಿ ಕಸಬಳಿಯುವವರಾಗಿದ್ದವರು. ಅಂದರೆ ಪುರುಷೋತ್ತಮನ ಹಿಂದಿನವರು ಆ ಕುಲದಿಂದ ಬಂದವರು. ಅಂಥ ಹೀನ ಕುಲದವನಿಗೆ ಕಂಚೀ ಕುಮಾರಿಯಂತಹ ರತ್ನವನ್ನು ಕೊಡುವುದೆಂದರೇನು? ಆ ಹಿಂದಿನವರ ವೃತ್ತಿಯನ್ನು ಜ್ಞಾಪಿಸಿಕೊಳ್ಳುವಂತೆ ಚಿನ್ನದ ಹಿಡಿಯ ಕಸಪೊರಕೆಯನ್ನು ಅರಮನೆಯಲ್ಲಿಟ್ಟುಕೊಂಡಿದ್ದಾನಂತೆ ಪುರುಷೋತ್ತಮ. ಚಿನ್ನದ ಹಿಡಿಯಾದ ಮಾತ್ರಕ್ಕೆ ಕಸಪೊರಕೆ ಕಸಪೊರಕೆತಾನೆ? ಅದನ್ನು ಹಿಡಿಯುವವನು ಕಸಪೊರಕೆ ರಾಜ ತಾನೆ?

"ಇಂತಹ ಕಸಬಳಿಯುವವನಿಗೋ ನನ ಮಗಳನ್ನು ಕೊಡುವುದು? ಛಿ ಛಿ! ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ. ಈ ಮದುವೆ ನಡೆಯದು." ಎಂದು ಕಂಚೀರಾಜನು ಪುರುಷೋತ್ತಮನಿಗೆ ಸಮಾಚಾರ ಕಳುಹಿಸಿದನು.

ಹೀಗೆ ಕಂಚೀ ರಾಜನ ನಿರಾಕರಣೆಯನ್ನು ಕೇಳಿದ ಕೂಡಲೇ ಪುರುಷೋತ್ತಮನಿಗೆ ಹಟವೂ ಪೌರುಷವೂ ಜಾಗ್ರತವಾಯಿತು. ಗಂಗರಾಜರು ಮೊದಲಿನಿಂದಲೂ ಜಗನ್ನಾಥಸ್ವಾಮಿಯ ಆರಾಧಕರು. ಪುಣ್ಯಕ್ಷೇತ್ರವಾದ ಜಗನ್ನಾಥದಲ್ಲಿ ದೇವರಿಗೆ ಬ್ರಹ್ಮಾಂಡವಾದ ಆಲಯವನ್ನು ಕಟ್ಟಿಸಿದವರು ಗಂಗವಂಶದ ಪ್ರಭುಗಳೇ. ದೇವರ ಕೈಂಕರ್ಯವನ್ನು ಸ್ವಂತವಾಗಿ ಮಾಡುವುದು ಆ ರಾಜರ ವಂಶಾಚಾರವಾಗಿಯೇ ನಡೆದು ಬಂದಿತ್ತು.

ದೇವಾಲಯದಲ್ಲಿ ನಡೆಯುವ ವಿಶೇಷ ಉತ್ಸವಗಳಲ್ಲಿ ಲಾಂಛನಪ್ರಾಯವಾಗಿ ದೇವಾಲಯದ ಕಸಬಳಿಯುವ ಕ್ರಮವನ್ನು ರಾಜನೇ ಮಾಡುತ್ತಿದ್ದನು. ಆದರಂತೆ ಪುರುಷೋತ್ತಮನೂ ಚಿನ್ನದ ಕಟ್ಟಿನ ಕಸಪೊರಕೆಯಿಂದ ದೇವಾಲಯದಲ್ಲಿ ಕಸಗುಡಿಸುವುದೂ ಕ್ರಮವೇ. ಕಂಚೀ ರಾಜನು ತನ್ನನ್ನೂ ತನ್ನ ಆರಾಧ್ಯ ದೈವವನ್ನೂ ಅವಮಾನಪಡಿಸಿದಂತೆ ಪುರುಷೋತ್ತಮನಿಗೆ ರೋಷವೆದ್ದಿತು. ಅವನಿಗೆ ತಕ್ಕ ಶಾಸ್ತಿ ಮಾಡಬೇಕೆಂದು ನಿಶ್ಚಯಿಸಿ ಕಂಚಿಯ ಮೇಲೆ ದಾಳಿತೆಗೆದನು. ಮದುವೆಯ ದಿಬ್ಬಣ ಯುದ್ಧ ಸೇನೆಯಾಯಿತು.

ಕಂಚಿ ರಾಜನು ಅದಕ್ಕೇನೂ ಹೆದರಲಿಲ್ಲ. ಯುದ್ಧದಲ್ಲಿ ಗಂಗ ಸೇನೆಯನ್ನು ಅವಲೀಲೆಯಿಂದ ಸೋಲಿಸಿ ಓಡಿಸಿಬಿಟ್ಟನು. ಮೊದಲು ಸೋತರೂ ಪುರುಷೋತ್ತಮನು ನಿರಾಶನಾಗದೆ, ಎರಡನೇಸಾರಿ ಇಮ್ಮಡಿ ಸೈನ್ಯದಿಂದಲೂ ಮುಮ್ಮಡಿ ಉತ್ಸಾಹದಿಂದಲೂ, ಪಟ್ಟು ಹಿಡಿದು ಯುದ್ಧ ಮಾಡಿದುದರಿಂದ ಕಂಚಿ ರಾಜನು ಸೋತು ಸುಣ್ಣವಾಗಿಬಿಟ್ಟನು.

ಈ ಸಾರಿ ಪುರುಷೋತ್ತಮನು ದೈವ ದ್ರೋಹಿ ಯಾದ ಕಂಚಿ ರಾಜನನ್ನು ಸುಮ್ಮನೆ ಬಿಡಬಾರದೆಂದು ಕೊಂಡು ಅವನನ್ನೂ, ಅವನ ಮಗಳನ್ನೂ ಬಂಧಿಸು ವಂತೆ ಸೈನಿಕರಿಗೆ ಆಜ್ಞೆ ಮಾಡಿದನು.



ಹೀಗೆ ತನ್ನ ವಶವಾದ ಆ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳಲು ಪುರುಷೋತ್ತಮನಿಗೆ ಯಾವ ಅಭ್ಯಂತರವೂ ಇಲ್ಲದುದರಿಂದ ಹಾಗೆಯೇ ಮಾಡಿಕೊಂಡು ಕಂಚಿರಾಜನ ಗರ್ವ ಮುರಿಯುವ ನೆಂದೇ ಎಲ್ಲರೂ ಅಂದುಕೊಂಡರು. ಆದರೆ ಪುರು ಷೋತ್ತಮನು ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ತನ್ನ ಮುಖ್ಯ ಮಂತ್ರಿಯನ್ನು ಕರೆದು "ಈ ಹುಡುಗಿ ಯನ್ನು ಯಾವನಾದರೂ ಕಸಬಳಿಯುವವನನ್ನು ನೋಡಿ, ಅವನೊಂದಿಗೆ ಮದುವೆ ಮಾಡಿಸಿಬಿಡಿರಿ." ಎಂದು ಅಪ್ಪಣೆ ಮಾಡಿದನು.

ಮಂತ್ರಿಗೆ ಸಮಸ್ಯೆಗಿಟ್ಟುಕೊಂಡಿತು. ಕೋಪ ದಿಂದ ಪುರುಷೋತ್ತಮನು ಹಾಗೆ ಆಜ್ಞೆ ಮಾಡಿದ್ದನು. ಕೋಪ ತಗ್ಗಿದ ಮೇಲೆ ಆ ಆಜ್ಞೆಯನ್ನು ಹಿಂದೆಗೆದು ಕೊಳ್ಳುವನೇನೋ ಎಂದು ಕೆಲವು ದಿನ ತಡೆದನು. ಆಮೇಲೆ ಅವನಾಗಿ ಕಂಚಿ ಕುಮಾರಿಯ ಮಾತು ಎತ್ತಿದೊಡನೆ, "ನಾನು ಹೇಳಿದಂತೆ ಮಾಡಿದಿರಷ್ಟೇ? ಗರ್ವಿಷ್ಟರಿಗೆ ಸರಿಯಾದ ಶಾಸ್ತಿ ಅದೇ! ಇನು ಬಿಡಿ ಆ ಮಾತು" ಎಂದು ಮಂತ್ರಿಯ ಬಾಯಿ ಮುಚ್ಚಿಸಿಬಿಟ್ಟ ಪುರುಷೋತ್ತಮ.

ಮಂತ್ರಿ ಸುಮ್ಮನಾದನು. ಅವನು ಬುದ್ಧಿ ಕುಶಲ ನಾದುದರಿಂದ, ಈ ವಿಷಯದಲ್ಲಿ ಅವಸರಪಡಕೂಡ ದೆಂದುಕೊಂಡು, ಒಳ್ಳೆಯ ಸಮಯವನ್ನು ಕಾಯುತ್ತ ನಿರೀಕ್ಷಿಸುತ್ತಿದ್ದನು.

ಕಂಚಿಕುಮಾರಿಯನ್ನು ಯಾರಿಗೂ ತಿಳಿಯ ದಂತಹ ಒಂದು ರಹಸ್ಯ ಸ್ಥಾನದಲ್ಲಿರಿಸಿ ಸಕಲ ಸೌಕರ್ಯಗಳನ್ನೂ ಏರ್ಪಡಿಸಿಕೊಟ್ಟನು. ಅಲ್ಲಿ ಅವಳಿಗೆ ರಾಜೋಪಚಾರಗಳೇ ನಡೆಯುತ್ತಿದ್ದುವು. ಅವಳ ತಂದೆಯೂ ನಾಮಕಾರ್ಥ ಖೈದಿಯಾಗಿದ್ದು ಗೌರವದಿಂದಲೇ ನಡೆಯಿಸಿಕೊಳ್ಳಲ್ಪಡುವ ಸಂಗತಿ ಪುರುಷೋತ್ತಮನಿಗೆ ತಿಳಿಯದು.

ಅಪ್ಪಣೆ ಕೊಟ್ಟ ಮೇಲೆ ಪುರುಷೋತ್ತಮನು ಕಂಚೀ ರಾಜನನ್ನೂ ಕುಮಾರಿಯನ್ನೂ ಪೂರ್ತಿ ಮರೆತುಬಿಟ್ಟನು. ಕಂಚೀ ರಾಜನೂ ಯಾರೋ ಹೇಳಿದ ಚಾಡಿಯನ್ನು ಕೇಳಿ ಏನೋ ಹಟಕ್ಕೆ ಬಿದ್ದುದಕ್ಕೆ ಪಶ್ಚಾತ್ತಾಪ ಪಡುತ್ತಿದ್ದನು.

ಹೀಗಿರಲು ಕೆಲವು ತಿಂಗಳಲ್ಲಿ ಜಗನ್ನಾಥ ಸ್ವಾಮಿಯ ಉತ್ಸವದ ದಿನಗಳು ಬಂದುವು. ವಾಡಿಕೆಯಂತೆ ಪುರುಷೋತ್ತಮನು ದೇವರ ಸೇವೆಯ ದೀಕ್ಷೆಯಲ್ಲಿ ಮಗ್ನನಾದನು. ಚಿನ್ನದ ಕಟ್ಟುಗಳುಳ್ಳ ಕಸಪೊರಕೆ ಯನ್ನು ಸೇವಕರು ಪಾಲಕಿಯಲ್ಲಿಟ್ಟು ತಂದರು. ಅರ್ಚಕರು ಅದನ್ನು ಪುರುಷೋತ್ತಮ ರಾಜನ ಕೈಗೆ ಕೊಟ್ಟರು. ಪುರುಷೋತ್ತಮನು ಅತ್ಯಂತ ಭಕ್ತಿ ಯಿಂದ ಅದನ್ನು ಹಿಡಿದುಕೊಂಡು ದೇವರ ಪಾದಗಳ

ಮುಂದಿನ ಭಾಗವನ್ನು ಗುಡಿಸಲು ತೊಡಗಿದನು. ಹಾಗೆಯೇ ದೇವಾಲಯದ ಒಂದು ಸುತ್ತು ಗುಡಿಸಿದನು.

ಹಾಗೆ ಅವನು ದೇವರ ಮುಂದೆ ಕಸಬಳಿಯುತ್ತಿದ್ದಾಗ ಮಂತ್ರಿ ವಿನಯದಿಂದ ರಾಜನ ಮುಂದೆ ಕೈಕಟ್ಟಿಕೊಂಡು ನಿಂತನು. ಅವನ ಹಿಂದೆ ಸರ್ವಾಲಂಕಾರ ಭೂಷಿತೆಯಾಗಿ ಮದುಮಗಳಂತೆ ಲೋಕೈಕ ಸುಂದರಿ ಹೂಮಾಲೆ ಹಿಡಿದುಕೊಂಡು ನಿಂತಳು.

"ಮಹಾಪ್ರಭುಗಳು ಕ್ಷಮಿಸಬೇಕು. ನಿಮ್ಮ ಆಜ್ಞೆಯನ್ನು ನೆರವೇರಿಸುವ ಸಮಯವು ಈಗ ತಾನೇ ನನಗೆ ಪ್ರಾಪ್ತವಾಯಿತು. ದೇವರ ಪಾದ ಧೂಳಿಯನ್ನು ಗುಡಿಸಿಬಳಿಯುವ ಪರಮ ಸೇವಕ ನನ್ನೇ ಪತಿಯಾಗಿ ವರಿಸುವೆನೆಂದು ಈ ಹುಡುಗಿ ಪ್ರತಿಜ್ಞೆ ಹಿಡಿದಿದ್ದಾಳೆ. ನಿಮ್ಮಾಜ್ಞೆಯೂ ಅದಕ್ಕೆ ಸರಿಯಾಗಿಯೇ ಆಗಿತ್ತು. ಆದರೆ ಎಲ್ಲಿ ಹುಡುಕಿದರೂ ಅಷ್ಟೊಂದು ಯೋಗ್ಯತೆಯುಳ್ಳ ವರನು ನನಗೆ ಕಾಣಲಿಲ್ಲ. ಆದುದರಿಂದ ಈ ಕನ್ಯೆಯನ್ನು ನಿಮಗೇ ಅರ್ಪಿಸಲು ನಿಶ್ಚಯಿಸಿದ್ದೇನೆ. ಇದರಲ್ಲಿ ನಿಮ್ಮಾಜ್ಞೆ ನೆರವೇರಿಸಿದ ತೃಪ್ತಿ ನನಗೂ ಎಲ್ಲರಿಗೂ ಆಗುತ್ತದೆ" ಎಂದು ಹೇಳಿ ಮಂತ್ರಿ ಹಿಂದಕ್ಕೆ ಜರುಗಿದನು.

ಆಗ ಕಂಚಿ ರಾಜಕುಮಾರಿ ಲಜ್ಜಾವನತ ಮುಖಿಯಾಗಿ ಭಕ್ತಿ ಭಾವದಿಂದ ಹೂವಿನ ಮಾಲೆಯನ್ನು ಪುರುಷೋತ್ತಮನ ಕೊರಳಿಗೆ ಹಾಕಿಬಿಟ್ಟಳು. ಅದೇ ವೇಳೆಯಲ್ಲಿ ಮಂತ್ರಿಯ ಯೋಜನೆಯಂತೆ ಗುಡಿಯ ಮೇಲು ಭಾಗದಿಂದ ಹೂವಿನ ಮಳೆ ಸುರಿಯಿತು. ಆಶ್ಚರ್ಯದಿಂದ ಸ್ತಬ್ಧನಾಗಿ ನಿಂತ ಪುರುಷೋತ್ತಮನಿಗೆ, ಕಳೆದ ನೆನಪುಗಳು ಜಾಗ್ರತವಾಗ ತೊಡಗಿದುವು. ಆ ಕನ್ಯೆಯನ್ನು ಯಾವನಿಗೆ ಮದುವೆಮಾಡಿ ಕೊಡಬೇಕೆಂದು ತಾನು ಆಜ್ಞಾಪಿಸಿದ್ದೆನೋ ಅವನು ತಾನೇ ಎಂಬುದಾಗಿ ಮಂತ್ರಿ ತೀರ್ಮಾನಿಸಿರುವುದನ್ನು ಮೆಚ್ಚಿ ಒಪ್ಪಿಕೊಂಡವನಂತೆ ಕೈಚಾಚಿದನು. ಸಿದ್ಧವಾಗಿದ್ದ ಇನ್ನೊಂದು ಮಾಲೆ ಅವನ ಕೈಗೆ ಆ ಕ್ಷಣವೇ ಕೊಡಲಾಯಿತು. ಅದನ್ನು ಕಂಚಿಕುಮಾರಿಯ ಕೊರಳಿಗೆ ಹಾಕಿದನು ಪುರುಷೋತ್ತಮ. ಆ ಮೇಲೆ 'ಸೆರೆ' ಯಿಂದ ಕಂಚಿರಾಜನೂ ವಿಮುಕ್ತನಾಗಿ ಬಂದನು.

ಬಹು ವೈಭವದಿಂದ ವಿವಾಹ ಮಹೋತ್ಸವ ನೆರವೇರಿತು. ಈ ರೀತಿಯಾಗಿ ಮಂತ್ರಿ ತಾಳ್ಮೆ ವಹಿಸಿ ಶುಭಾಂತಕ್ಕೆ ಕಾರಣನಾದ ಸಂಗತಿ ಪ್ರಜೆಗಳಿಗೆಲ್ಲಾ ತಿಳಿದು, ಎಲ್ಲರೂ ಮಂತ್ರಿಯನ್ನು ಸಾವಿರ ಬಾಯಿಗಳಿಂದ ಹೊಗಳಿದರು. ಕಂಚಿರಾಜನೂ ಧನ್ಯತೆಯನ್ನು ಅನುಭವಿಸಿದನು.



# ಹೇಗೆ ತಿನ್ನುವುದು?

ಗಾಣದಸುಬ್ಬ ಅಂಗಳದಲ್ಲಿ ಎಳ್ಳನ್ನು ಒಣಗಲು ಹಾಕಿ ಎರಡು ಕೈಗಳೂ ಇಲ್ಲದವನನ್ನು ಹುಡುಕಿ ಹಿಡಿದು ಕರೆತಂದು ಕಾವಲಿಗಿಟ್ಟನು. ಮೊಂಡು ಕೈಗಳಿಂದ ಎಳ್ಳನ್ನು ಕದ್ದು ತಿನ್ನಲು ಅವನಿಂದಾಗದೆಂತಲೇ ಅವನನ್ನು ಹುಡುಕಿ ಕರೆತಂದಿದ್ದನು.

ಆದರೂ ಸಂದೇಹದಿಂದ ಅರ್ಧ ಗಂಟೆಯ ಮೇಲೆ ಎಳ್ಳನ್ನು ನೋಡಲು ಬಂದ ಸುಬ್ಬನು, ಮೊಂಡನು ಹೇಗೋ ಕದ್ದು ಗಿದ್ದು ತಿಂದನೇನೋ ಎಂದುಕೊಂಡು, "ಏನೋ? ಎಳ್ಳು ಸ್ವಲ್ಪ ತಗ್ಗಿದ ಹಾಗೆ ಕಾಣುತ್ತೆ. ತಿಂದುಗಿಂದಿಯಾ?" ಎಂದು ಕೇಳಿದನು.

"ಕೈಯೇ ಇಲ್ಲದ ನಾನು ಹೇಗೆ ತಿಂದೇನು ಅಯ್ಯಾ?" ಎಂದು ಕಾವಲಿನವನು ತನ್ನ ಮೊಂಡು ಕೈಗಳನ್ನು ತೋರಿಸಿದನು.

"ಆ ಉಪಾಯವೆಲ್ಲಾ ನನಗೊಗ್ಗಿತ್ತುಬಿಡೋ. ಮೊಂಡು ಕೈಯನ್ನು ಒದ್ದೆಮಾಡಿಕೊಂಡು ಎಳ್ಳಿನ ಮೇಲೆ ಅದ್ದಿ ಬಾಯಿಗೆ ಒಯ್ಯದೆ ಬಿಡುತ್ತೀಯೇನು?" ಎಂದ ಸುಬ್ಬ.

ತಾನು ಅಂಥಾ ಕೆಲಸ ಮಾಡಲಿಲ್ಲವೆಂದು ಮೊಂಡನು ತನ್ನ ತಾಯಿ ಮೇಲೆ, ಹೆಂಡತಿಯ ಮೇಲೆ, ಮಕ್ಕಳ ಮೇಲೆ ಪ್ರಮಾಣಮಾಡಿದನು. ಸುಬ್ಬನಿಗೆ ತೃಪ್ತಿಯಾಯಿತು.

ಮೊಂಡನಿಗೆ ಎಳ್ಳು ಹೇಗೆ ತಿನ್ನಬೇಕೆಂಬುದು ಗೊತ್ತಾಯಿತು. ಆ ಪದ್ಧತಿಯಿಂದ ಅವನು ಎಳ್ಳನ್ನು ತಿಂದುಕೊಂಡು ಕಾವಲಿದ್ದನು. ಮೊಂಡು ಕೈ ಒದ್ದೆಯಾಗಲು ನೀರಿನ ಬದಲಿಗೆ ತನ್ನ ಎಂಜಲನ್ನೆ ಬಳಸಿಕೊಂಡನು, ಸುಬ್ಬನಿಗೆ ಈ ವಿಷಯ ಗೊತ್ತೇ ಆಗಲಿಲ್ಲ.





# ಗೀತಾಸಾರ

ಹಿಂದೆ ಒಂದು ಕಾಲದಲ್ಲಿ ಸುವರ್ಣಪುರವೆಂಬ ರಾಜ್ಯದ ಪಾಲಕನಾಗಿದ್ದ ವಿವೇಕವರ್ಧನ ಮಹಾರಾಜನು ತನ್ನ ಪ್ರಜೆಗಳು ಸದಾಸರ್ವದಾ ಸಂತೋಷವಾಗಿರಬೇಕೆಂದು ಬಯಸಿಕೊಂಡಿದ್ದನು. ಪ್ರಜೆಗಳಿಗಾಗಿ ಎಷ್ಟೇ ಸೌಕರ್ಯಗಳನ್ನು ಹೊಂದಿಸಿ ಕೊಟ್ಟರೂ ಏನೋ ಒಂದು ಕೊರತೆಯಿಂದ ಚಿಂತೆ ಪಡುವವರು ಇರುವರೆಂದು ತಿಳಿದು ರಾಜನಿಗೆ ಯೋಚನೆ ಹಿಡಿಯಿತು. ಎಲ್ಲ ಜನರಿಗೂ ಸಂತೋಷ ಬರುವ ಹಾಗೆ ಏನು ಮಾಡಬೇಕೆಂದು ದೊಡ್ಡ ದೊಡ್ಡ ಜ್ಞಾನಿಗಳನ್ನು ಕೇಳಿದನು. ಸುಖ ಸೌಕರ್ಯಗಳಾವುವೂ ಮನುಷ್ಯನಿಗೆ ನಿಜವಾದ ಸಂತೋಷವನ್ನು ಕೊಡಲಾರವೆಂದೂ, ತೃಪ್ತಿಯೊಂದೇ ನಿಜವಾದ ಸಂತೋಷ ಕೊಡುವಂಥಾದ್ದೆಂದೂ ಜ್ಞಾನಿಗಳು ಹೇಳಿದರು. ತೃಪ್ತಿ ಹೇಗೆಬರುತ್ತದೆಂದು ರಾಜನು ಅವರನ್ನು ಕೇಳಿದನು.

"ಅದಕ್ಕೆ ವೇದಾಂತವೇ ಮದ್ದು. ವೇದಾಂತವು ಪ್ರಜೆಗಳ ಮನಸ್ಸಿನಲ್ಲಿ ಚೆನ್ನಾಗಿ ಅಂಟಿಕೊಳ್ಳಬೇಕು. ವೇದಾಂತಸಾರವನ್ನು ಕಾಯಿಸಿ ಶೋಧಿಸಿ ತೆಗೆದಂಥಾದ್ದು ಭಗವದ್ಗೀತೆ. ಆ ಗ್ರಂಥವನ್ನು ಪ್ರಜೆಗಳ ಮನಸ್ಸಿಗೆ ಅಂಟಿಕೊಳ್ಳುವಂತೆ ಬೋಧಿಸಿಬಿಟ್ಟರೆ ಅವರಿಗೆ ತೃಪ್ತಿಯೂ ಸಂತೋಷವೂ ಉಂಟಾಗುತ್ತದೆ." ಎಂದರು ಜ್ಞಾನಿಗಳು.

ಅದಕ್ಕಾಗಿ ವಿವೇಕವರ್ಧನ ಮಹಾ ರಾಜನು ಪಂಡಿತರನ್ನು ನಿಯೋಜಿಸಿ, ತಾನೇ ಸ್ವತಃ ಗೀತೆಯ ಬೋಧನೆಗಳನ್ನು ಕೇಳಿ, ಜ್ಞಾನಿಗಳು ಹೇಳಿದ ಮಾತಿನಲ್ಲಿ ನಿಜವಿದೆಯೆಂದು ಅರಿತುಕೊಂಡನು. ಆದರೆ ದೇಶದ ಪ್ರಜೆಗಳಿಗೆಲ್ಲಾ ಮನಸ್ಸಿಗೆ ಅಂಟುವ ಹಾಗೆ ಗೀತೆಯಸಾರವನ್ನು ಅರ್ಥವಿಸಿ ಬೋಧಿಸಲಿಕ್ಕೆ ಅನೇಕ ಮಂದಿ ಸಮರ್ಥರಾದವರು ಬೇಕಷ್ಟೆ? ಅದಕ್ಕಾಗಿ ರಾಜನು ಒಂದು ಪ್ರಕಟನೆಯನ್ನು ಹೊರಡಿಸಿದನು. "ಭಗವದ್ಗೀತೆಯನ್ನು ಪಾಮರ ಜನರಿಗೆ ಅರ್ಥವಾಗುವ ಹಾಗೆ ಬೋಧಿಸಲು ಸಮರ್ಥರಾದ ಪಂಡಿತೋತ್ತಮರು ರಾಜಾಸ್ಥಾನಕ್ಕೆ ಬರತಕ್ಕದ್ದು. ಅವರನ್ನು ಸನ್ಮಾನ ಮಾಡಿ ಲೋಕ ಕಲ್ಯಾಣಕ್ಕಾಗಿ ನಿಯೋಜಿಸಲಾಗುತ್ತದೆ" ಎಂದು ಎಲ್ಲೆಲ್ಲಿಯೂ ಡಂಗುರಸಾರಿಸಿದನು.

ಆ ಡಂಗುರದ ಸಂದೇಶ ಕೇಳಿ ಅನೇಕ ಮಂದಿ ಪಂಡಿತರು ಆಸ್ಥಾನಕ್ಕೆ ಬಂದರು. ಅವರನ್ನು

ಪರೀಕ್ಷಿಸುವಂತೆ ರಾಜನು ಆಸ್ಥಾನ ಪಂಡಿತನಿಗೆ ಅಪ್ಪಣೆ ಕೊಟ್ಟನು. ಆಸ್ಥಾನ ಪಂಡಿತನು ಬಂದಿರುವ ಪಂಡಿತರೊಂದಿಗೆ ಗೋಷ್ಠಿ ನಡೆಸಿ, ರಾಜನ ಹತ್ತಿರ ಹೋಗಿ, "ಮಹಾ ಪ್ರಭುಗಳೇ, ಅವರೆಲ್ಲರೂ ಉದ್ದಂಡ ಪಂಡಿತರು. ಭಗವದ್ಗೀತೆಯಲ್ಲಿ ಅವರನ್ನು ಪರೀಕ್ಷಿಸುವ ಶಕ್ತಿ ನನಗಿಲ್ಲ." ಎಂದನು.

ರಾಜನಿಗೆ ಏನು ಮಾಡಬೇಕೆಂದು ತೋರಲಿಲ್ಲ. ಭಗವದ್ಗೀತೆಯಲ್ಲಿ ಉದ್ದಂಡ ಪಂಡಿತರಾದವರಲ್ಲಿ ಹೆಚ್ಚು ಕಡಿಮೆಗಳು ಇದ್ದೀತು. ಅದನ್ನು ತಿಳಿದು ಯಾರನ್ನು ಎಲ್ಲೆಲ್ಲಿಗೆ ಕಳುಹಿಸಬೇಕೆಂದು ನಿರ್ಣಯಿಸ ಬಹುದು. ಆ ಹೆಚ್ಚು ಕಡಿಮೆಗಳನ್ನು ತಿಳಿಯುವ ಬಗೆ ಹೇಗೆ?

ಆ ಸಮಯದಲ್ಲಿ ರಾಜಧಾನಿಗೆ ಬುದ್ಧಿಮತ್ತೆಯಲ್ಲಿ ಖ್ಯಾತಿಪಡೆದ ಚಿರಂಜೀವಿ ಬಂದಿರುವನೆಂದು ರಾಜನಿಗೆ ಗೊತ್ತಾಯಿತು. ಎಲ್ಲೆಲ್ಲಿಯ ಪಂಡಿತರೆಲ್ಲಾ ರಾಜಾ ಸ್ಥಾನದಲ್ಲಿ ಸೇರಿರುವ ಸಂಗತಿಯನ್ನು ತಿಳಿದು, ಅವ ರೊಂದಿಗೆ ಗೋಷ್ಠಿ ನಡೆಯಿಸುವ ಕೋರಿಕೆಯಿಂದ ಚಿರಂಜೀವಿ ತಾನಾಗಿ ಅಲ್ಲಿಗೇ ಬಂದನು. ಅವನನ್ನು ನೋಡಿ ಆಸ್ಥಾನ ಪಂಡಿತನಿಗೆ ಸಂತೋಷವಾಯಿತು. ಅವನು ಚಿರಂಜೀವಿಯನ್ನು ರಾಜನ ಬಳಿಗೆ ಕರೆ ದೊಯ್ದು, "ಎಂತಹ ಸಮಸ್ಯೆಯನ್ನಾದರೂ ತೀರಿಸ ಬಲ್ಲವರು ಇವರು. ಅದೃಷ್ಟವಶಾತ್ ನಮ್ಮ ನಗರಕ್ಕೆ ಬಂದರು. ನಮ್ಮ ಸಮಸ್ಯೆಯನ್ನು ಇವರಿಂದ ಪರಿಷ್ಕರಿಸಿಕೊಳ್ಳಬಹುದು" ಎಂದನು.

ರಾಜನು ಚಿರಂಜೀವಿಯೊಡನೆ ತನ್ನ ಸಮಸ್ಯೆ ಯನ್ನು ಹೇಳಿದನು. "ನಾನೇನೂ ಅಷ್ಟು ದೊಡ್ಡವ ನಲ್ಲ. ಪ್ರಯತ್ನಿಸುತ್ತೇನೆ" ಎಂದನು ಚಿರಂಜೀವಿ.

ಮರುದಿನ ರಾಜನ ಅಪ್ಪಣೆಯಂತೆ ಸಭೆಯಲ್ಲಿ ಪಂಡಿತರೆಲ್ಲರೂ ಬಂದು ಕೂಡಿದರು. ಚಿರಂಜೀವಿ ಅವರನ್ನೆಲ್ಲಾ ಪರಿಶೀಲಿಸುವಂತೆ ನೋಡಿ, "ನಿಮ್ಮ ಪಾಂಡಿತ್ಯದಲ್ಲಿರುವ ತಾರತಮ್ಯಗಳನ್ನು ತಿಳಿಯ



ಬೇಕೆಂದು ಪ್ರಭುಗಳು ಬಯಸುತ್ತಾರೆ. ಅದಕ್ಕಾಗಿ ಒಂದು ಸ್ಪರ್ಧೆಯನ್ನು ಏರ್ಪಡಿಸಬೇಕೆಂದು ಮಾಡಿದರೆ ನಿಮಗೆಲ್ಲಾ ಒಪ್ಪಿಗೆಯೇ?" ಎಂದು ಕೇಳಿದನು.

ಒಪ್ಪಿಗೆ ಎಂದು ಎಲ್ಲರೂ ತಲೆಯಾಡಿಸಿದ ಮೇಲೆ, ಚಿರಂಜೀವಿ, "ಭಗವದ್ಗೀತೆಗೆ ಭಾಷ್ಯ ಹೇಳಲು ಒಂದು ಜೀವಿತಕಾಲವೂ ಸಾಲದೆಂದು ಹೇಳುತ್ತಾರೆ. ಹಾಗಿರುವಾಗ ನೀವು ಆ ಮಹಾ ಗ್ರಂಥವನ್ನು ಇಷ್ಟೊಂದು ಸ್ವಲ್ಪ ಕಾಲದಲ್ಲಿ ಹೇಗೆ ಅರ್ಥಮಾಡಿಕೊಂಡಿರಿ?" ಎಂದು ಕೇಳಿದನು.

"ನೀವು ಹೇಳಿದುದು ನಿಜವೇ. ನಾನು ಹಟ ಹಿಡಿದು ಪ್ರಯತ್ನ ಪಟ್ಟು ಗೀತೆಯ ಸಾರವನ್ನು ಜೀರ್ಣಿಸಿಕೊಂಡಿದ್ದೇನೆ" ಎಂದು ಪ್ರತಿಯೊಬ್ಬ ಪಂಡಿ ತನೂ ಭಗವದ್ಗೀತೆಯನ್ನು ಕಲಿಯಲು ತಾನು ಮಾಡಿದ ಸಾಧನೆಯನ್ನು ಕುರಿತು, ಶ್ರದ್ಧೆಯನ್ನು ಕುರಿತು, ದೀಕ್ಷೆಯನ್ನು ಕುರಿತು, ಘನತೆಯನ್ನು

ಕುರಿತು ಬಹಳ ಉತ್ಸಾಹದಿಂದ ಹೇಳಿಕೊಂಡನು. ಎಲ್ಲರೂ ಹೇಳಿದುದನ್ನು ಕೇಳಿ ಚಿರಂಜೀವಿ ರಾಜನ ಬಳಿಗೆ ಹೋಗಿ, "ಮಹಾಪ್ರಭುಗಳೇ, ಇವರೆಲ್ಲರೂ ಮಹಾ ಪಂಡಿತರೆನ್ನಲು ಸಂದೇಹವೇನಿಲ್ಲ. ಆದರೆ ಇವರಲ್ಲಿ ಒಬ್ಬರೂ ಸಹಾ ಗೀತೆಯ ಸಾರವನ್ನು ತಿಳಿದವರಲ್ಲ." ಎಂದನು.

ಪಂಡಿತರೆಲ್ಲಾ ಬೆರಗಾದರು. ರಾಜನು ಕೂಡಾ, "ನೀವು ಅವರನ್ನು ಗೀತೆಯ ಬಗ್ಗೆ ಯಾವ ಪ್ರಶ್ನೆ ಯನ್ನೂ ಕೇಳದೆ ಒಮ್ಮೆಗೇ ಹೀಗೆ ಹೇಳುವುದು ಸರಿಯಲ್ಲ" ಎಂದನು.

"ನಾನು ಕೂಡಾ ಭಗವದ್ಗೀತೆಯನ್ನು ಓದಿದ್ದೇನೆ. ಗೀತೆಯಲ್ಲಿ ನನಗೆ ಅರ್ಥವಾದುದು ಒಂದೇ ಒಂದು. ಪ್ರತಿ ಮನುಷ್ಯನೂ ನಾನು ಎಂಬ ಭಾವನೆಯನ್ನು ಬಿಡಬೇಕು. ಯಾವ ಕೆಲಸವನ್ನಾದರೂ ತಾನು ಮಾಡುತ್ತೇನೆಂದು ಭಾವಿಸದೆ, ಭಗವಂತನು ಮಾಡಿ ಸುತ್ತಿದ್ದಾನೆಂದು, ತಾನು ನಿಮಿತ್ತ ಮಾತ್ರನೆಂದು ಅರಿ ತಿರಬೇಕು. ನಾನು ಎಂಬ ಪದವು ಅಜ್ಞಾನವನ್ನೂ ಅಹಂಕಾರವನ್ನೂ ಸೂಚಿಸುತ್ತದೆ. ಗೀತಾಸಾರವನ್ನು ಜೀರ್ಣಿಸಿದ್ದೇವೆಂದು ಇವರೆಲ್ಲ ಹೇಳುತ್ತಾರೆ. ಅದನ್ನು ತಮ್ಮ ಸ್ವಂತ ಶಕ್ತಿಯಿಂದ ಸಾಧಿಸಿಕೊಂಡೆವೆಂದು ಅಂದುಕೊಂಡೇ ಹೇಳುತ್ತಾರೆಯೇ ಹೊರತು, ಪರ- ಶಕ್ತಿಯೊಂದಿರುವುದನ್ನು ನೆನೆಯಲೇ ಇಲ್ಲ. ಗೀತೆ ಯನ್ನು ಚೆನ್ನಾಗಿ ಜೀರ್ಣಿಸಿಕೊಂಡವರು ಅದನ್ನು ಕುರಿತು ಹೀಗೆ ಹೇಳುತ್ತಿದ್ದಿಲ್ಲ. ಅವರಿಗೆ ಅಹಂ ಎಂಬ ಭಾವನೆ ಸ್ವಲ್ಪವೂ ಇರುತ್ತಿದ್ದಿಲ್ಲ." ಎಂದನು ಚಿರಂಜೀವಿ. ಪಂಡಿತರೆಲ್ಲಾ ಚಿರಂಜೀವಿ ಹೇಳಿದುದು ನಿಜವೇ ಎಂದು ಪ್ರಾಂಜಲ ಮನಸ್ಸಿನಿಂದ ಏಕಗ್ರೀವ ವಾಗಿ ಒಪ್ಪಿದರು, ತಮ್ಮಲ್ಲಿ ವಿದ್ಯೆಯ ಗರ್ವವೂ, ಅಹಂಕಾರವೂ ಹೆಚ್ಚಾಗಿಯೇ ಇರುವುದನ್ನೂ ಒಪ್ಪಿ, ಈಗ ತಮಗೆ ಜ್ಞಾನೋದಯವಾಯಿತೆಂದೂ ಹೇಳಿದರು. ಕಡೆಗೆ ಚಿರಂಜೀವಿ ರಾಜನನ್ನು ಕುರಿತು ಹೀಗೆಂದನು: "ಸಂತೋಷವೆಂಬ ಶಬ್ದಕ್ಕೆ ಅರ್ಥವೇ ಇಲ್ಲ ಪ್ರಭುಗಳೇ, ದೇಶದಲ್ಲಿ ಯಾರೂ ಸೋಮಾರಿ ಗಳಿಲ್ಲದಂತೆ ನೋಡಿಕೊಳ್ಳಿ. ಜನರೆಲ್ಲ ಅವರವರ ಶಕ್ತಿಗೆ ತಕ್ಕ ಹಾಗೆ ಕಷ್ಟಪಟ್ಟು ಕೆಲಸ ಮಾಡುತ್ತಾ ಇದ್ದರೆ, ಸಂಪಾದಿಸುವುದನ್ನು ಅನುಭವಿಸುವ ಪ್ರತಿ ಯೊಬ್ಬನಿಗೂ ತನಗೆ ತಿಳಿಯದಂತೆಯೇ ತೃಪ್ತಿ ಯಾಗುತ್ತದೆ. ವೇದಾಂತ ಬೋಧನೆಗಳು ಮನುಷ್ಯ ರನ್ನು ಸೋಮಾರಿಗಳಾಗಿ ಮಾಡುತ್ತವೆ. ಅವುಗಳ ಮೇಲೆ ಆಸಕ್ತಿಯಿದ್ದವರು ಹೇಗೂ ತಿಳಿದುಕೊಳ್ಳು ತ್ತಾರೆ. ಅದು ಅವರವರ ಸ್ವಂತ ವಿಷಯ. ಅದಕ್ಕಾಗಿ ರಾಜಕೀಯ ಪ್ರಯತ್ನವೇನೂ ಬೇಕಾಗಿಲ್ಲ ಪ್ರಭುಗಳೇ. ಜನರು ಉದ್ಯೋಗಶೀಲರಾಗುವಂತೆ ಕಲ್ಪಿಸಿರಿ. ಸಾಕು"



# ಕಳ್ಳ ಕಳ್ಳನೇ!

**ಮ**ಧ್ಯ ರಾತ್ರಿಯ ಹೊತ್ತಿನಲ್ಲಿ ಒಬ್ಬ ಕಳ್ಳ ಪುಣ್ಯಕೋಟಿಯ ಮನೆಗೆ ಓಡುತ್ತಾಬಂದು ಒಳಗೆ ನುಗ್ಗಿ ಬಾಗಿಲು ಹಾಕಿ ತಾಳ ಜಡಿದು ಪುಣ್ಯಕೋಟಿಯ ಕಾಲಿಗೆ ಬಿದ್ದು— "ಅಯ್ಯಾ, ನನ್ನನ್ನು ರಕ್ಷಕಭಟರು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಅವರಿಗೆ ಸಿಕ್ಕಿದರೆ ನನ್ನನ್ನು ಕೊಲ್ಲುತ್ತಾರೆ. ನಾನಿಲ್ಲಿಗೆ ಬರಲಿಲ್ಲವೆಂದು ಹೇಳಿ ನನ್ನನ್ನು ಉಳಿಸಿರಿ. ನಿಮ್ಮ ಉಪಕಾರ ಮರೆಯಲಾರೆ" ಎಂದು ಬೇಡಿಕೊಂಡನು.

ರಾಜಭಟರು ಅಲ್ಲಿಗೆ ಬಂದು ಕಳ್ಳನನ್ನು ಕುರಿತು ವಿಚಾರಿಸಿದರು.

ಪುಣ್ಯಕೋಟಿ ರಾಜ ಭಟರೊಂದಿಗೆ ಅಲ್ಲಿಗೆ ಯಾರೂ ಬರಲಿಲ್ಲವೆಂದು ಹೇಳಿ ಕಳ್ಳನನ್ನು ಕಾಪಾಡಿದನು. ರಾಜಭಟರು ಹೊರಟು ಹೋದ ಮೇಲೆ ಕಳ್ಳನು ಪುಣ್ಯಕೋಟಿಗೆ ಕತ್ತಿ ತೋರಿಸಿ, ಮನೆಯಲ್ಲಿರುವ ನಗ ನಾಣ್ಯಗಳನ್ನೆಲ್ಲ ಕೊಡುವಂತೆ ಜೋರು ಮಾಡಿದನು.

"ನನ್ನ ಉಪಕಾರ ಮರೆಯಲಾರೆನೆಂದು ಈಗ ತಾನೇ ಹೇಳಿದೆಯಲ್ಲ?" ಎಂದು ಪುಣ್ಯಕೋಟಿ ಆಶ್ಚರ್ಯದಿಂದ ಹೇಳಿದ.

"ನಾನು ಹಾಗೆ ಹೇಳಲೇ ಇಲ್ಲ." ಎಂದ ಕಳ್ಳ.

"ಕಳ್ಳನಾದರೂ ಇಷ್ಟರೊಳಗೆ ಇಷ್ಟೊಂದು ಸುಳ್ಳೇ!" ಎಂದ ಪುಣ್ಯಕೋಟಿ.

"ನೀನು ಮಾತ್ರ ಸತ್ಯ ಹರಿಶ್ಚಂದ್ರನೋ? ಇದೇ ಈಗ ರಾಜಭಟರೊಂದಿಗೆ ಸುಳ್ಳು ಹೇಳಲಿಲ್ಲೇನು?" ಎಂದು ಕಳ್ಳ ಬಲವಂತದಿಂದ ಮನೆಯೊಳಗೆಲ್ಲ ದೋಚಾಡಿದ.





# ತಾತನ ನಿಧಿ

ಬಹಳ ವರ್ಷಗಳ ಹಿಂದೆ ಒಂದು ಗ್ರಾಮದಲ್ಲಿ ರುದ್ರಪ್ಪನೆಂಬ ಒಬ್ಬ ರೈತನಿದ್ದ. ಅವನು ತನ್ನ ಸ್ವಂತ ರಟ್ಟೆಗಳ ಕಷ್ಟದಿಂದಲೇ ಸಂಪಾದಿಸುತ್ತ ಚೆನ್ನಾಗಿ ತಿಂದುಂಡು ಸುಖವಾಗಿದ್ದುದಷ್ಟೇ ಅಲ್ಲದೆ ಸ್ವಲ್ಪ ಹಣವನ್ನೂ ಸೇರಿಸಿಡುತ್ತಿದ್ದ. ಆದರ ಮೇಲೆ ತಾಯಿ ಇಲ್ಲದ ತನ್ನ ಇಬ್ಬರು ಗಂಡು ಮಕ್ಕಳನ್ನೂ ಯಾವ ಕೊರತೆಯೂ ಅವರಿಗಾಗದಂತೆ ಬೆಳೆಸುತ್ತಿದ್ದ. ಈ ರೀತಿಯಾಗಿ ಬೆಳೆದ ಆ ಅಣ್ಣತಮ್ಮಂದಿರು ತಮ್ಮ ಕೈ ಕಾಲುಗಳಿಗೆ ಸಾಕಷ್ಟು ಬಲಬಂದರೂ, ತಂದೆಯ ಕಷ್ಟದಲ್ಲಿ ಭಾಗಿಗಳಾಗದೆ ತಮ್ಮ ಆಟಪಾಟ ವಿಲಾಸಗಳಿಗೆ ಆಗಾಗ ತಂದೆಯಿಂದ ಹಣ ಕೇಳಿ ಕಿತ್ತುಕೊಳ್ಳುತ್ತಿದ್ದರು.

ಮಕ್ಕಳ ಈ ವಿಧಾನವನ್ನು ನೋಡಿ ನೋಡಿ ಕಡೆಗೆ ರುದ್ರಪ್ಪನು, ಅವರಿಗೆ ಬುದ್ಧಿ ಕಲಿಸಬೇಕೆಂದುಕೊಂಡು ಇಬ್ಬರನ್ನೂ ಕರೆದು, "ನೋಡ್ರಪ್ಪಾ, ನಿಮ್ಮ ಖರ್ಚುಗಳಿಗೆ ಬೇಕಾದಷ್ಟು ಸಂಪಾದಿಸಲು ನನಗೆ ಶಕ್ತಿಯಿಲ್ಲ. ನಿಮ್ಮ ಅಜ್ಜನ ನಿಧಿ ಒಂದಿದೆ. ಅದನ್ನೇ ಈಗ ನಿಮಗೆ ಹೇಳಿಬಿಡುತ್ತೇನೆ. ನೀವು ಹೋಗಿ ಅದನ್ನೇ ತಂದು ಹಂಚಿಕೊಂಡುಬಿಡಿ. ನಾನು ನನಗೆ ಬೇಕಾದಷ್ಟನ್ನು ಯಾವಾಗಲೂ ಸಂಪಾದಿಸಿಕೊಂಡೇ ಇದ್ದುದರಿಂದ ಅದನ್ನು ತಂದುಕೊಳ್ಳುವ ಗೊಡವೆಗೆ ಹೋಗಲಿಲ್ಲ." ಎಂದನು. "ಎಲ್ಲಿದೆ ಆ ನಿಧಿ?" ಎಂದು ಇಬ್ಬರು ಮಗಂದಿರೂ ಆತುರದಿಂದ ಕೇಳಿದರು.

"ಇಲ್ಲಿಂದ ಉತ್ತರದಿಕ್ಕಿಗೆ ಇನ್ನೂರು ಮೈಲು ದೂರದಲ್ಲಿ ಧರ್ಮಪುರಿ ಎಂಬ ಊರು ಸಿಗುತ್ತದೆ. ಆ ಊರಿನ ದಕ್ಷಿಣದ ಗಡಿಯಲ್ಲಿ ರತ್ನಗಿರಿ ಎಂಬ ಗುಡ್ಡವಿಧೆ. ಆ ಗುಡ್ಡದ ಪಶ್ಚಿಮ ಬದಿಯಲ್ಲಿ ಒಂದು ಗುಹೆ ಇದೆ. ಆ ಗುಹೆಯೊಳಗೆ ಹೋದರೆ ನಿಮ್ಮ ತಾತನ ಶಂಭುದಾಸ ಎಂಬ ಹೆಸರು ಕೆತ್ತಿದಕಲ್ಲು ಕಾಣುತ್ತದೆ. ಆ ಕಲ್ಲನ್ನು ಎತ್ತಿದರೆ ನಿಧಿ ದೊರಕುತ್ತದೆ. ಅವರು ಆ ಪ್ರಾಂತದಲ್ಲೇ ಕೆಲಸಮಾಡಿಕೊಂಡಿದ್ದು, ಸಂಪಾದಿಸಿದ್ದನ್ನು ಅಲ್ಲಿ ಬಚ್ಚಿಟ್ಟಿದ್ದಾರೆ. ನೀವು ಅದನ್ನು ತಂದುಕೊಂಡು ಸುಖವಾಗಿ ಬದುಕಿರಪ್ಪ. ಅದನ್ನು ನೀವು ವಶಪಡಿಸಿಕೊಳ್ಳಬೇಕಾದರೆ ಸುಮಾರು ಎರಡು ವರ್ಷ ಕಷ್ಟಪಡಬೇಕಾದೀತು" ಎಂದ ರುದ್ರಪ್ಪ.

ಕೂಡಲೇ ರುದ್ರಪ್ಪನ ಮಗಂದಿರಿಬ್ಬರೂ, ಕೈಯಲ್ಲಿದ್ದಷ್ಟು ಹಣವನ್ನೂ, ದಾರಿಯಲ್ಲಿ ತಿನ್ನಲು ಸ್ವಲ್ಪ

ಆರ್. ಬಾಬು

ತಿಂಡಿಯನ್ನೂ ತೆಗೆದುಕೊಂಡು ಉತ್ತರ ದಿಕ್ಕಿಗೆ ಪ್ರಯಾಣ ಹೊರಟರು. ಅವರು ಎರಡು ಊರುಗಳನ್ನು ದಾಟುವಷ್ಟರಲ್ಲಿ ಕೈಯಲ್ಲಿದ್ದ ಹಣವೂ ತಿಂಡಿಯೂ ತೀರಿಹೋದುವು. ಇನ್ನೇನು ಮಾಡುವುದೆಂದು ಇಬ್ಬರೂ ಯೋಚನೆಗೆ ಬಿದ್ದರು.

ಆಗ ಆ ದಾರಿಯಾಗಿ ಬಂದ ಒಬ್ಬ ರೈತ ಅವರನ್ನು ನೋಡಿ, "ಏನು ನೋಡುತ್ತೀರಿ ? ಕೂಲಿ ಕೆಲಸಕ್ಕೆ ಜನಬೇಕು. ಬರುತ್ತೀರಾ ? ಹೊಲದಲ್ಲಿ ನಟ್ಟಿ ನಡೆಯುತ್ತಿದೆ. ಬನ್ನಿ ಕೆಲಸಮಾಡಿ ಹಣ ಪಡೆದುಕೊಳ್ಳಿ" ಎಂದನು.

ತಮ್ಮ ಹೊಟ್ಟೆಯ ಸಮಸ್ಯೆ ಪರಿಹಾರವಾಗಲಿಕ್ಕೆ ದೇವರೇ ಈ ರೈತನನ್ನು ಕಳುಹಿಸಿರಬೇಕೆಂದುಕೊಂಡು, ಆ ಅಣ್ಣತಮ್ಮಂದಿರು ನಾಲ್ಕು ದಿನ ಹೊಲಗಳಲ್ಲಿ ಕೆಲಸಮಾಡಿ ಸಾಕಷ್ಟು ಸಂಪಾದಿಸಿಕೊಂಡಾಗ, ಉಳಿದ ಪ್ರಯಾಣವನ್ನು ಹೇಗೆ ಮಾಡಬೇಕೆಂಬುದು ಅವರಿಗೆ ಗೊತ್ತಾಯಿತು. ಆ ಹಣವು ಮುಗಿಯುವವರೆಗೂ ಪ್ರಯಾಣ ಮಾಡಿ ಮತ್ತೆ ಕೆಲಸಕ್ಕಾಗಿ ಹುಡುಕ ತೊಡಗಿದರು. ಒಬ್ಬ ಕುದುರೆಯ ವರ್ತಕನು ಅವರನ್ನು ತನ್ನ ಕುದುರೆಗಳ ಸಂರಕ್ಷಣೆಗಾಗಿ ಇಟ್ಟುಕೊಂಡು, ಆ ಕುದುರೆಗಳೆಲ್ಲ ಮಾರಾಟವಾಗಿ ಹೋಗುವವರೆಗೂ ಅವರಿಂದ ಕೆಲಸ ಮಾಡಿಸಿ, ಕಡೆಗೆ ಅವರ ಕೆಲಸವನ್ನು ಮೆಚ್ಚಿ, ಕೊಡಬೇಕಾದುದಕ್ಕಿಂತ ಸ್ವಲ್ಪ ಹೆಚ್ಚೇ ಕೊಟ್ಟು ಕಳುಹಿಸಿದನು.

ಮುಂದೆ ಅವರು ಉದಯಗಿರಿ ಎಂಬ ಊರನ್ನು ತಲುಪುವಷ್ಟರಲ್ಲಿ ಅವರ ಹತ್ತಿರ ಇದ್ದ ಹಣವೆಲ್ಲ ಮುಗಿದುಹೋಯಿತು. ಆ ಊರಿನಲ್ಲಿ ಒಬ್ಬ ವರ್ತಕನು ಅವರನ್ನು ತನ್ನ ಅಂಗಡಿಯಲ್ಲಿ ಕೆಲಸಕ್ಕಿಟ್ಟುಕೊಂಡನು. ಅಲ್ಲಿ ಮಾಡಿದ ಕೆಲಸಗಳಿಂದ ಅವರಿಗೆ ವರ್ತಕತನದ ಗುಟ್ಟುನಿಟ್ಟುಗಳು ತಿಳಿದು ಬಂದುವು. ತಮ್ಮ ಕೈಗೆ ಬಂದ ಹಣವನ್ನು ಮೂಲಧನವಾಗಿ ಹಾಕಿ, ವ್ಯಾಪಾರಮಾಡಿದರೆ ತುಂಬಾ ಹಣ ಸಂಪಾದನೆ ಮಾಡಬಹುದೆಂದು ತೋರಿತು. ಅದರಂತೆ ವರ್ತಕನು ಕೊಟ್ಟ ಹಣವನ್ನು ಬಹಳ ಮಿತವಾಗಿ ಖರ್ಚು ಮಾಡುತ್ತ ತಾವೇ ಒಂದು ಅಂಗಡಿಯನ್ನು ತೆರೆದರು.



ಅವರ ವ್ಯಾಪಾರವು ಚೆನ್ನಾಗಿಯೇ ನಡೆಯಿತು. ಕಾಲಕ್ರಮದಲ್ಲಿ ಒಳ್ಳೆಯ ಲಾಭ ಬಂದು ಇಬ್ಬರೂ ಜಗಳವಿಲ್ಲದೆ ಭಾಗ್ಯವಂತರಾಗಿ ಮದುವೆ ಮಾಡಿಕೊಂಡರು. ಆಮೇಲೆ ಅವರಿಗೆ ತಂದೆ ಹೇಳಿದ ತಾತನ ನಿಧಿಯ ನೆನಪಾಗಿ ಅಂಗಡಿ ಮನೆಗಳ ಬಾಧ್ಯತೆಗಳನ್ನು ಹೆಂಡತಿಯರಿಗೆ ಒಪ್ಪಿಸಿ, ಬೇಕಾದಷ್ಟು ಹಣ ತೆಗೆದುಕೊಂಡು ಮುಂದೆ ಪ್ರಯಾಣ ಮಾಡಿದರು.

ಧರ್ಮಪುರಿ ಎಂಬ ಊರನ್ನು ತಲುಪಿ, ವಿಚಾರಿಸಿದಾಗ ಅಲ್ಲಿ ಯಾವ ಗುಡ್ಡವೂ ಇರಲಿಲ್ಲ. ರತ್ನಗಿರಿ ಎಂಬ ಗುಡ್ಡವು ಆ ಪ್ರಾಂತದಲ್ಲೆಲ್ಲಿಯೂ ಇಲ್ಲವೆಂದು ಗೊತ್ತಾಯಿತು. ಅನೇಕಮಂದಿ ಹಾಗೆಯೇ ಹೇಳಿದರು. ತಮ್ಮ ತಂದೆ ತಮ್ಮನ್ನು ಮೋಸ ಪಡಿಸಿದರೆಂದು ಗೊತ್ತಾಗಿ ಅವರಿಗೆ ಸಿಟ್ಟು ಬಂದಿತು.

ಅಲ್ಲಿಂದ ಅವರು ಸೀದಾ ತಂದೆಯ ಬಳಿಗೆ ಹಿಂದಿರುಗಿ, "ಏನಪ್ಪ, ಇಂಥಾ ಸುಳ್ಳು ಹೇಳಿದಿರಿ? ನಮ್ಮನ್ನು ಮನೆಯಿಂದ ಓಡಿಸಬೇಕೆಂದು ಮನಸ್ಸಿನಲ್ಲಿದ್ದರೆ ಸ್ಪಷ್ಟವಾಗಿ ಹೇಳಿಬಿಡಿ!" ಎಂದರು ಬಹಳ ಕೋಪದಿಂದ.

ರುದ್ರಪ್ಪನು ಸಣ್ಣದಾಗಿ ನಗುತ್ತ, "ನಾನು ಸುಳ್ಳು ಪಳ್ಳು ಏನೂ ಹೇಳಲಿಲ್ಲವಲ್ಲಾ? ನಿಮ್ಮ ರೀತಿಯೆಲ್ಲಾ ನೋಡುವಾಗ ನಿಧಿ ಸಂಪಾದಿಸಿಕೊಂಡವರ ಹಾಗೆಯೇ ಕಾಣುತ್ತದಲ್ಲಾ?" ಎಂದನು.

"ನಾವು ಕಷ್ಟಪಟ್ಟು ಸಂಪಾದಿಸಿಕೊಂಡರೆ ನೀವು ಹೇಳಿದ ನಿಧಿಯಾಗುತ್ತದೆಯೆ?" ಎಂದು ಮಗಂದಿರಿಬ್ಬರೂ ತಮ್ಮ ಎಲ್ಲಾ ಅನುಭವಗಳನ್ನೂ ಹೇಳಿದರು.

"ಇನ್ನೇನು ಮತ್ತೆ? ನಿಧಿ ನಿಮ್ಮೊಳಗೇ ಇತ್ತಲ್ಲಾ? ತಾತನ ನಿಧಿ ಅಂದರೆ, ತಾತನ ರಕ್ತ ನಿಮ್ಮಲ್ಲಿದೆ ಎಂದೇ ಅರ್ಥ. ನೀವು ನಿಮಗೆ ಬೇಕಾದ ಹಣವನ್ನು ಇನ್ನೊಬ್ಬರ ಹತ್ತಿರ ಸುಮ್ಮನೆ ಕೈಚಾಚಿ ಕೇಳದೆ ನೀವೇ ಸ್ವಂತ ಕೆಲಸಮಾಡಿ ಸಂಪಾದಿಸಿಕೊಂಡಿರೋ ಇಲ್ಲವೋ? ಶ್ರದ್ಧೆಯಿಂದ ಕೆಲಸ ಮಾಡಿದರೆ ಹೆಚ್ಚು ಲಾಭ ಬರುತ್ತದೆಂದು ಅನುಭವದಿಂದ ಗೊತ್ತಾಯಿತಷ್ಟೆ? ಹೊಟ್ಟೆ ತುಂಬಿದರೆ ಸಾಕೆಂಬ ಅಲ್ಪ ಸಂತೋಷಿಗಳಾಗದೆ, ಕೋಟೀಶ್ವರರಾಗಬೇಕೆಂಬ ದೀಕ್ಷೆ ಹಿಡಿದಿರೋ ಇಲ್ಲವೋ? ಅಂಥಾ ದೀಕ್ಷೆಯಿಂದ ಕೋಟೀಶ್ವರರಾಗದಿದ್ದರೂ, ಸೌಭಾಗ್ಯ ಸೇರುವುದು ನಿಜವೆಂದು ತಿಳಿದಿರಿ. ಈ ಬಗೆಯ ಗುಣಗಳಿಂದ ಸಂಪಾದಿಸಿದ್ದೇ ನಿಜವಾದ ನಿಧಿ ಗೊತ್ತಾ? ನಾನು ಮೊದಲೇ ಹೇಳಿದೆನಲ್ಲಾ. ಎರಡು ವರ್ಷ ನೀವು ಕಷ್ಟ ಪಡಬೇಕಾದೀತು ಅಂತ." ಎಂದ ರುದ್ರಪ್ಪ.

ತಮ್ಮ ತಂದೆ ತಮಗೆ ಕರಗುತ್ತಾ ಹೋಗುವ ನಿಧಿಯ ಬದಲಿಗೆ, ಕರಗದಿರುವಂತಹ ನಿಧಿಯನ್ನೇ ತೋರಿಸಿದರೆಂದು ಮಗಂದಿರಿಗೆ ಗೊತ್ತಾಯಿತು.





# ದೇವೀಭಾಗವತ

ಕೋಸಲದೇಶದ ರಾಜಧಾನಿಯಾದ ಅಯೋಧ್ಯಾ ನಗರವನ್ನು ಧ್ರುವಸಂಧಿ ಎಂಬ ರಾಜನು ಪಾಲಿಸಿ ಕೊಂಡಿದ್ದನು. ಅವನಿಗೆ ಇಬ್ಬರು ರಾಣಿಯರಿದ್ದರು. ಹಿರಿಯವಳ ಹೆಸರು ಮನೋರಮಾ, ಇನ್ನೊಬ್ಬಳ ಹೆಸರು ಲೀಲಾವತಿ. ಮನೋರಮೆಗೆ ಸುದರ್ಶನ ನೆಂಬ ಮಗನೂ, ಲೀಲಾವತಿಗೆ ಶತ್ರುಜಿತ್ತು ಎಂಬ ಮಗನೂ ಇದ್ದರು.

ಆ ಇಬ್ಬರು ರಾಜಕುಮಾರರಲ್ಲಿ ಸುದರ್ಶನನು ಶತ್ರುಜಿತ್ತುವಿಗಿಂತ ಒಂದು ತಿಂಗಳಿಗೆ ದೊಡ್ಡವ ನಾಗಿದ್ದನು. ಆದರೆ ಸೌಂದರ್ಯದಲ್ಲಿಯೂ, ಬುದ್ಧಿ ವಂತಿಕೆಯಲ್ಲಿಯೂ ಸುದರ್ಶನನಿಗಿಂತ ಶತ್ರುಜಿತ್ತು ಹೆಚ್ಚಿನವನಾಗಿದ್ದನು. ಆದುದರಿಂದ ತಂದೆಗೂ, ಮಂತ್ರಿಗಳಿಗೂ ಸೇವಕ ಪರಿವಾರಗಳಿಗೂ, ಪುರ ಜನರಿಗೂ ಶತ್ರುಜಿತ್ತುವಿನ ಮೇಲೆ ಬಹಳ ಇಷ್ಟ,

ಹೀಗಿರುವಾಗ ಒಂದು ದಿನ ಧ್ರುವಸಂಧಿ ರಾಜನು ಬೇಟೆಯಾಡಲು ಕಾಡಿಗೆ ಹೋದನು. ಅವನು ಬೇಟೆಯಲ್ಲಿ ಮಗ್ನನಾಗಿದ್ದಾಗ, ಅಕಸ್ಮಾತ್ತಾಗಿ ಒಂದು ಪೊದರಿನ ಮರೆಯಲ್ಲಿದ್ದ ಸಿಂಹವು ಅವನ ಮೇಲೆ ಲಂಘಿಸಿಬಿತ್ತು. ಮಹಾವೀರನಾದ ಧ್ರುವಸಂಧಿಯೂ, ಸಿಂಹವೂ ಸ್ವಲ್ಪ ಹೊತ್ತು ಹೋರಾಹೋರಿಯಾಗಿ ಹೊರಳಾಡಿದರು. ಕಡೆಗೆ ಧ್ರುವಸಂಧಿ ಸಿಂಹವನ್ನೂ ಸಿಂಹವು ಧ್ರುವಸಂಧಿಯನ್ನೂ ನಿರ್ಜೀವಪಡಿಸುವುದ ರಲ್ಲಿ ಕಾಳಗ ಕೊನೆಗಂಡಿತು, ರಾಜನೊಂದಿಗೆ ಬೇಟೆಗೆ ಹೋಗಿದ್ದ ಪರಿವಾರದವರು ಹಿಂದಿರುಗಿ ನಡೆದ ಸಂಗತಿಯನ್ನು ಮಂತ್ರಿಗಳಿಗೆ ಹೇಳಿದರು.

ಮಂತ್ರಿಗಳು ಸತ್ತುಹೋದ ರಾಜನಿಗೆ ಉತ್ತರ ಕ್ರಿಯೆಗಳನ್ನು ವಿಧಿವತ್ತಾಗಿ ಜರುಗಿಸಿ ಆದ ಮೇಲೆ, ಸುದರ್ಶನನಿಗೆ ಪಟ್ಟಾಭಿಷೇಕಮಾಡಲು ಸನ್ನಾಹಕ್ಕೆ ತೊಡಗಿದರು. ಅದು ಎಲ್ಲರಿಗೂ ಒಪ್ಪಿಗೆಯಾಗಿಯೂ ಇದ್ದಿತು. ಹಿರಿಯರಾಣಿ ಮನೋರಮೆಯ ಮಗನೂ, ಹಿರಿಯನೂ ಆದುದರಿಂದ ಅವನೇ ಪಟ್ಟಕ್ಕೆ ಬರುವುದು ಸಹಜವಾಗಿಯೂ ಇತ್ತು.

ಆದರೆ ಇದರಲ್ಲಿಯೂ ಮನಸ್ತಾಪವೇಳುವ ಸೂಚನೆ ತೋರ ತೊಡಗಿತು. ಮನೋರಮೆಯ

೮. ಧ್ರುವಸಂಧಿಯ ಕಥೆ



ತಂದೆ ವೀರಸೇನನು ಕಳಿಂಗದೇಶದ ರಾಜನಾಗಿರುವವನು. ಅವನು ತನ್ನ ಅಳಿಯನು ದುರ್ಮರಣಕ್ಕೀಡಾದ ಸಂಗತಿಯನ್ನು ತಿಳಿದು ತನ್ನ ಮೊಮ್ಮಗನಾದ ಸುದರ್ಶನನ ಕ್ಷೇಮ ಸೌಭಾಗ್ಯಗಳನ್ನು ನೋಡಲು ಅಯೋಧ್ಯೆಗೆ ಬಂದನು. ಹಾಗೆಯೇ ಉಜ್ಜಯಿನಿ ರಾಜನಾದ ಶತ್ರುಜಿತ್ತುವಿನ ಅಜ್ಜ ಯುಧಾಜಿತ್ತುವೂ ಇಲ್ಲಿಗೆ ಬಂದನು. ಹೀಗೆ ಬಂದ ಮನೋರಮೆ, ಲೀಲಾವತಿಯರ ತಂದೆಯರು ಅವರವರ ಮೊಮ್ಮಗಂದಿರ ಒಳಿತುಗಳನ್ನು ಕುರಿತು ಮಂತ್ರಿಗಳೊಂದಿಗೆ ಮಾತಾಡಲು ತೊಡಗಿದರು.

ಆ ಸಮಯದಲ್ಲಿ ವೀರಸೇನನೂ ಯುಧಾಜಿತ್ತುವೂ ಒಂದೆಡೆ ಕೂಡಿ ಮಾತಾಡುವಾಗ, ಯುಧಾಜಿತ್ತು ವೀರಸೇನನೊಂದಿಗೆ, "ನಿನ್ನ ಮೊಮ್ಮಗನಾದ ಸುದರ್ಶನನು ವಯಸ್ಸಿನಲ್ಲಿ ಒಂದು ಚೂರು ದೊಡ್ಡವನಾದರೇನಾಯಿತು ? ನನ್ನ ಅಳಿಯ ಶತ್ರುಜಿತ್ತು ಎಲ್ಲಾ ಬಗೆಯ ರಾಜಲಕ್ಷಣಗಳಲ್ಲಿಯೂ ಸುದರ್ಶನನಿಗಿಂತ ಹೆಚ್ಚಿನವನಾಗಿದ್ದಾನೆ. ವಯೋಜ್ಯೇಷ್ಠನಿಗಿಂತಲೂ ಗುಣಜ್ಯೇಷ್ಠನೇ ಹೆಚ್ಚಿನವನಲ್ಲವೇ ? ನಿಜಕ್ಕೂ ರಾಜನಾಗಿರಬೇಕಾದವನು ನನ್ನ ಮೊಮ್ಮಗನೇ !" ಎಂದನು.

ಅದಕ್ಕೆ ವೀರಸೇನನು "ಇದೊಂದು ಹುಚ್ಚು ಮಾತು. ನನ್ನ ಮಗಳು ಮನೋರಮೆಯೇ ಧ್ರುವಸಂಧಿಯ ಪಟ್ಟದರಾಣಿ, ಅವಳಿಗೆ ಹುಟ್ಟಿದ ಸುದರ್ಶನನೇ ಹಿರಿಯನಾಗಿದ್ದು ರಾಜನಾಗಲು ಅರ್ಹನಲ್ಲವೆಂದರೆ ಅದೆಂತಹ ಧರ್ಮ ? ಎಂತಹ ನ್ಯಾಯ ?" ಎಂದನು.

ಅದಕ್ಕೆ ಯುಧಾಜಿತ್ತು ಮಂತ್ರಿಗಳನ್ನು ನೋಡಿ, "ನೀವುಗಳೆಲ್ಲಾ ಒಂದಾಗಿ ಸುದರ್ಶನನಿಗೇ ಪಟ್ಟಾಭಿಷೇಕ ಮಾಡಿದರೆ, ನನ್ನ ಮೊಮ್ಮಗನು ಕೈಕಟ್ಟಿಕೊಂಡು ಸುಮ್ಮನಿರುವನೆಂದು ಭಾವಿಸುವಿರೇನು ? ಅವನಿಗೆ ಬುದ್ಧಿಶಕ್ತಿಯೂ, ಯುದ್ಧಶಕ್ತಿಯೂ ಬೇಕಾದಷ್ಟಿದೆ. ಬೆಂಬಲಕ್ಕೆ ಬಲಸಂಪನ್ನನಾದ ನಾನೂ ಇದ್ದೇನೆ. ನಿಮ್ಮೆಲ್ಲರನ್ನೂ ಒರೆಸಿಹಾಕಿ ಅವನು ರಾಜ್ಯವನ್ನು ಪಡೆಯಬಲ್ಲನು. ನಾನು ಕತ್ತಿಯನ್ನು ಎತ್ತಿಕೊಂಡೆನೆಂದರೆ ಭೂಮಿಯನ್ನೇ ಸೀಳಿ ಬಿಸುಡಬಲ್ಲೆ. ಜಾಗ್ರತೆ !" ಎಂದು ಹೆದರಿಸಿದನು.

ಹೀಗೆ ಇಬ್ಬರು ತಾತಂದಿರೂ ಘರ್ಷಣೆಗೆ ತೊಡಗಿದರು. ಅದನ್ನು ನೋಡುತ್ತಿದ್ದವರಿಗೆ ರೋಸಿಕೆಯೇ ಹುಟ್ಟಿತು. ಇದರೆಡೆಯಲ್ಲಿ ಧ್ರುವಸಂಧಿ ರಾಜನು ಸತ್ತು, ರಾಜಧಾನಿಯಲ್ಲಿ ಒಡಕು ಹುಟ್ಟಿರುವುದನ್ನು ತಿಳಿದು, ನಗರದೊಳಗೆ ಸಾಧ್ಯವಾದಷ್ಟು ದೋಚಿಕೊಳ್ಳಬೇಕೆಂದು ಶೃಂಗಿಬೇರಪುರದಿಂದ ಅರಣ್ಯವಾಸಿಗಳಾದ ಬೇಡರಗುಂಪೊಂದು ಧಾವಿಸಿ ಬಂದಿತು. ಅವರು ಒಂದಷ್ಟು ದೂರದಲ್ಲಿ ನಗರವನ್ನು ಮುತ್ತಲು ಕೂಡಿದಾಗ, ಯುಧಾಜಿತ್ತುವೂ, ವೀರಸೇನನೂ ತಮ್ಮ ತಮ್ಮ ಸೇನೆಗಳನ್ನು ಸಾಗಿಸಿಕೊಂಡು, ಅವರನ್ನು ಓಡಿಸಿ, ಅದೇ ವೇಗದಲ್ಲಿ ತಮ್ಮೊಳಗೇ

ದಾರುಣವಾಗಿ ಹೋರಾಡಲು ತೊಡಗಿದರು. ಈ ಹೋರಾಟದಲ್ಲಿ ಯುಧಾಜಿತ್ತು ವೀರಸೇನನನ್ನು ಕೊಂದು ಹಾಕಿಬಿಟ್ಟನು.

ತನ್ನ ತಂದೆಯ ಸಾವನ್ನು ನೋಡಿ ಮನೋರಮೆ ತುಂಬಾ ಶೋಕಿಸಿದಳು. ಗಂಡನು ತೀರಿದ ದುಃಖದೊಂದಿಗೆ, ತಂದೆ ತೀರಿದ ದುಃಖವೂ ಸೇರಿ ಅವಳ ಪಾಲಿಗೆ ಶೋಕಸಾಗರವೇ ಆಯಿತು. ಮಗನು ಪ್ರಾಯಕ್ಕೆಬಾರದ ಚಿಕ್ಕ ಹುಡುಗ. ಇನ್ನು ತನಗೆ ದಿಕ್ಕು ಯಾವುದು ? ತನ್ನ ತಂದೆಯನ್ನು ಯುದ್ಧದ ನೆವನದಲ್ಲಿಕೊಂದ ಯುಧಾಜಿತ್ತು ತನ ಮಗ ಸುದರ್ಶನನನ್ನು ಕೊಲ್ಲದೆ ಬಿಡುವನೇ ? ತನ್ನ ಮೊಮ್ಮಗನನ್ನು ರಾಜನನ್ನಾಗಿ ಮಾಡುವುದೇ ಯುಧಾಜಿತ್ತುವಿನ ಆಶಯವಾಗಿತ್ತು. ಇನ್ನು ತನಗೆ ಎಂದೆಂದಿಗೂ ಸವತಿ ಮತ್ಸರದ ಹೋರಾಟವೇ ಗತಿಯಾಯಿತು. ಅವಳು ತನ್ನನ್ನು ಕಾರಾಗೃಹದಲ್ಲಿ ಡಿಸದೇ ಬಿಡಲಾರಳು. ಮಂತ್ರಿಗಳೇನೋ ಮೊದಲು ತನ್ನ ಮಗನಿಗೆ ರಾಜ್ಯಾಭಿಷೇಕಮಾಡಲು ಸಿದ್ಧರಾದವರೇ, ಆದರೆ ಅವರು ಈಗ ಯುಧಾಜಿತ್ತುವಿನ ಮಾತು ಕೇಳಲೇ ಬೇಕಾಗುತ್ತದೆ. ಹೇಗೆ ನೋಡಿದರೂ ತನಗೂ ತನ್ನ ಮಗನಿಗೂ ಆಶ್ರಯವಿಲ್ಲದಾಯಿತೆಂದು ಅವಳು ತಪಿಸುತ್ತಿದ್ದಳು.

ವಿದಲ್ಲು ಎಂಬ ಮಂತ್ರಿ ಅವಳ ಮೇಲೆ ತುಂಬಾ ಸಹಾನುಭೂತಿಪರನಾಗಿ, ನಂಬುಗೆಯವನಾಗಿದ್ದನು. ಅಂತೆಯೇ ಮನೋರಮೆ ಆ ಮಂತ್ರಿಯನ್ನು ರಹಸ್ಯವಾಗಿ ಬರಮಾಡಿಕೊಂಡು, ತನ್ನ ಪರಿಸ್ಥಿತಿಯನ್ನು ಅವನ ಮುಂದೆ ಬಿಚ್ಚಿ, ತನಗೂ ತನ್ನ ಮಗನಿಗೂ ಏನಾದರೂ ದಾರಿ ತೋರಿಸಬೇಕೆಂದು ಕೇಳಿಕೊಂಡಳು.

ವಿದಲ್ಲು ಅವಳೊಂದಿಗೆ, " ಅಮ್ಮಾ, ನಿನಗೂ ನಿನ್ನ ಮಗನಿಗೂ ಎಷ್ಟು ಮಾತ್ರಕ್ಕೂ ಇಲ್ಲಿ ಕ್ಷೇಮವಿಲ್ಲ. ಕಾಶೀರಾಜನಾದ ಸುಬಾಹು ನನಗೆ ಸೋದರ ಮಾವನಾಗುತ್ತಾನೆ. ಅವನು ಹೆಚ್ಚಿನ ಬಲಶಾಲಿಯೂ



ಹೌದು. ನಾವು ಅಲ್ಲಿಗೆ ಹೋದರೆ ಅವನು ಆಶ್ರಯ ನೀಡಿ ಕಾಪಾಡಬಲ್ಲನು " ಎಂದನು.

ಮನೋರಮೆ ಅದಕ್ಕೆ ಒಪ್ಪಿದಳು. ವಿಶ್ವಾಸಿಕಳಾದ ಸೈರಂಧ್ರಿ ಎಂಬವಳನ್ನೂ ತನ್ನ ಮಗನನ್ನೂ ಕರೆದುಕೊಂಡು ವಿದಲ್ಲುವಿನೊಂದಿಗೆ ಕಾಶೀ ರಾಜ್ಯಕ್ಕೆ ಹೊರಟಳು. ಆ ದಿನ ರಾತ್ರಿಯಲ್ಲಿ ಅವಳನ್ನೂ ಅವಳೊಂದಿಗಿದ್ದವರನ್ನೂ ಕಳ್ಳರು ಅಟಕಾಯಿಸಿ ಇದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಕೇವಲ ಉಟ್ಟುಬಟ್ಟೆಗಳಷ್ಟೇ ಉಳಿದಿದ್ದುವು. ಬೆಳಗಾದ ಮೇಲೆ ಅವರು ಮೂವರೂ ಕಾಶೀರಾಜನ ಬಳಿಗೆ ಹೋಗುವ ಯೋಚನೆಬಿಟ್ಟು, ದೋಣಿಯಲ್ಲಿ ಗಂಗಾನದಿಯನ್ನು ದಾಟಿ, ಭರದ್ವಾಜ ಮುನಿಯ ಆಶ್ರಮವನ್ನು ಪ್ರವೇಶಿಸಿದರು.

ಭರದ್ವಾಜನು ದೀನಳಾದ ಮನೋರಮೆಯನ್ನು ನೋಡಿ, "ಯಾರಮ್ಮಾ ನೀನು ?" ಎಂದು ಕೇಳಿದನು. ಅವಳು ಏನೂ ಹೇಳಲಾಗದೆ.



ಆಕ್ಷೇಪಣೆಯನ್ನೂ ಎತ್ತಲಿಲ್ಲ. ಮನೋರಮೆಯೂ ಸುದರ್ಶನ ಕುಮಾರನೂ ಎಲ್ಲಿಗೆ ಹೊದರೋ ಏನಾದರೋ ಎಂಬುದು ಪ್ರಜೆಗಳಿಗೆ ಗೊತ್ತಾಗಲಿಲ್ಲ. ಆದರೆ ಯುಧಾಜಿತ್ತು ನಿಯೋಜಿಸಿದ ಗೂಢಚಾರರ ಮೂಲಕವಾಗಿ ಮನೋರಮೆಯೂ ಸುದರ್ಶನನೂ ಭರದ್ವಾಜಾ ಶ್ರಮದಲ್ಲಿ ಸುಖವಾಗಿರುವರೆಂಬ ಸಂಗತಿ ಗೊತ್ತಾಯಿತು. ಶತ್ರು ಶೇಷವನ್ನು ಉಳಿಸುವುದು ಒಳ್ಳೆಯದಲ್ಲವೆಂದುಕೊಂಡು ಯುಧಾಜಿತ್ತು, ಸುದರ್ಶನನನ್ನು ಕೊಲ್ಲಲು ನಿಶ್ಚಯಿಸಿ, ಚಿತ್ರಕೂಟ ಪರ್ವತಕ್ಕೆ ಹೋದನು. ಅಲ್ಲಿದ್ದ ನಿಷಾದರಾಜನಾದ ಬಲನೆಂಬವನನ್ನು ಸಂಧಿಸಿ ಮಾತಾಡಿ ಅವನನ್ನು ಕರೆದುಕೊಂಡು ಶೃಂಗಿಬೇರ ಪುರವನ್ನಾಳುವ ದುರ್ಧರ್ಷನೆಂಬವನ ಬಳಿಗೆ ಹೋದನು.

ಹೀಗೆ ಯುಧಾಜಿತ್ತು ತನ್ನ ನಾಶಕಾರ್ಯಕ್ಕೆ ಹೊರಟಿರುವುದನ್ನು ಕೇಳಿ ಮನೋರಮೆ ಅಳುತ್ತಾ ಭರದ್ವಾಜ ಮುನಿಯ ಬಳಿಗೆ ಹೋಗಿ ತನಗೆ ಬರಲಿರುವ ಆಪದವನ್ನು ಕುರಿತು ಹೇಳಿದಳು. ಭರದ್ವಾಜನು ಅವಳಿಗೆ ಧೈರ್ಯ ಹೇಳಿ, ಸಮಾಧಾನ ಪಡಿಸಿದನು.

ಯುಧಾಜಿತ್ತು ಭರದ್ವಾಜಾ ಶ್ರಮದ ಬಳಿಗೆಬಂದ ಕೂಡಲೇ ಭರದ್ವಾಜಮುನಿ ಆಶ್ರಮದೊಳಗಿನಿಂದ ಹೊರಗೆಬಂದು ಯುಧಾಜಿತ್ತುವನ್ನು ನೋಡಿ, ಬಂದ ಕಾರ್ಯವೇನೆಂದು ಕೇಳಿದನು. ಮನೋರಮೆಗಾಗಿ ಬಂದೆನೆಂದನು ಯುಧಾಜಿತ್ತು.

"ಗಂಡನನ್ನು ಕಳೆದುಕೊಂಡು, ತಂದೆಯನ್ನು ಕಳೆದುಕೊಂಡು, ಶೋಕದಲ್ಲಿ ಮುಳುಗಿ ತೇಲುತ್ತ, ತನ್ನ ಮಗನೊಂದಿಗೆ ಈ ಆಶ್ರಮದಲ್ಲಿ ಶರಣು ಪಡೆದಿರುವ ಮನೋರಮೆ ಇಲ್ಲಿಂದ ಹೊರಡುವಳೆಂದು ಕೊಂಡೆಯೇನು ?" ಎಂದನು ಭರದ್ವಾಜ.

"ಒಳ್ಳೆಯ ಮಾತಿನಲ್ಲಿ ಅವಳನ್ನು ಕಳುಹಿಸಿದರೆ ಸರಿ, ಇಲ್ಲದಿದ್ದರೆ ಬಲಾತ್ಕಾರವಾಗಿ ಎಳೆದುಕೊಂಡು ಹೋಗಬೇಕಾಗುತ್ತದೆ." ಎಂದನು ಯುಧಾಜಿತ್ತು.

ಧಾರೆ ಧಾರೆಯಾಗಿ ಕಣ್ಣೀರನ್ನೇ ಸುರಿಸಿಕೊಂಡಿರಲು, ವಿದಲ್ಲು ಮುನಿಯೊಂದಿಗೆ, ಧ್ರುವಸಂಧಿ ರಾಜನ ಮರಣದಿಂದ ಹಿಡಿದು ನಡೆದ ಎಲ್ಲಾ ಸಮಾಚಾರಗಳನ್ನೂ ಹೇಳಿದನು. ಅದನ್ನೆಲ್ಲ ಕೇಳಿ ಭರದ್ವಾಜನು ಮನೋರಮೆಯೊಂದಿಗೆ, "ಆದುದಾಯಿತು, ನೀನೇನೂ ದುಃಖಿಸಬೇಡ. ಇನ್ನು ನಿನಗೆ ಯಾವ ಭಯವೂ ಇಲ್ಲ. ನಿನ್ನ ಮಗನಾದ ಈ ಬಾಲಕನೇ ರಾಜನಾಗುತ್ತಾನೆ. ನಂಬು ನನ್ನ ಮಾತು. ನೀನು ಈ ಆಶ್ರಮದಲ್ಲೆ ನಿರ್ಭಯಳಾಗಿದ್ದುಬಿಡು" ಎಂದನು.

ಭಾರದ್ವಾಜಮುನಿ ತೆರವು ಮಾಡಿಕೊಟ್ಟ ಪರ್ಣಶಾಲೆಯಲ್ಲಿ ಮನೋರಮೆ ತನ್ನ ಮಗ ಸುದರ್ಶನನೊಂದಿಗೂ, ವಿದಲ್ಲು, ಸೈರಂಧ್ರಿಯರೊಂದಿಗೂ ಸುಖವಾಗಿ ದಿನಗಳನ್ನು ಕಳೆದು ಕೊಂಡಿದ್ದಳು.

ಅಯೋಧ್ಯೆಯಲ್ಲಿ ಯುಧಾಜಿತ್ತು ನಿರಾತಂಕವಾಗಿ ತನ್ನ ಮೊಮ್ಮಗೆ ಶತ್ರುಜಿತ್ತುವಿಗೆ ಮಹಾವೈಭವದಿಂದ ಪಟ್ಟಾಭಿಷೇಕವನ್ನು ನೆರವೇರಿಸಿದನು. ಯಾರೂ ಯಾವ



ಯುಧಾಜಿತ್ತುವಿನ ಮಾತುಕೇಳಿ ಭರದ್ವಾಜನು ಕೋಪಾವೇಶದಿಂದ, "ಎಲೋ ಪಾಪಿಯೇ! ಹೀನ ಮನುಷ್ಯನೇ! ಬಲಾತ್ಕಾರವಾಗಿ ಅವಳನ್ನು ಎಳೆದು ಕೊಂಡು ಹೋಗುವಿಯಾ? ಎಲ್ಲಿ, ಎಳೆದುಕೊಂಡು ಹೋಗು ನೋಡುತ್ತೇನೆ. ನಾವು ಋಷಿಗಳೆಂದರೆ ನಿನ್ನಂಥ ರಾಜವಂಶದವರಿಗೆ ಅಷ್ಟು ಹಗುರಾಗಿ ಹೋಯಿತೇನು?" ಎಂದನು.

ಯುಧಾಜಿತ್ತು ದುಡುಕದೆ ತನ್ನ ಮಂತ್ರಿ ಯೊಂದಿಗೆ, "ಈ ಮುನಿ ಹೇಳಿದ ಮಾತು ಕೇಳಿದೆ ಯಷ್ಟೇ? ಮನೋರಮೆಯನ್ನೂ ಅವಳ ಮಗನನ್ನೂ ಕರೆದುಕೊಂಡು ಹೋಗುವ ದಾರಿ ಹೇಗೆ? ಶತ್ರು ಶೇಷವನ್ನು ಉಳಿಸಲೇಬಾರದಷ್ಟೇ? ಸುದರ್ಶನನನ್ನು ಕೊಂದರೆ ಹೊರತು ನನ್ನ ಮೊಮ್ಮಗನಿಗೆ ಕ್ಷೇಮವಿಲ್ಲ. ನನ್ನನ್ನು ಇದಿರಿಸಿ ಹೋರಾಡುವವರಂತೂ ಯಾರೂ ಇಲ್ಲ. ಮುನಿ ಹೇಳಿದ ಮಾತುಕೇಳಿ ನಾವು ಹೆದರಿ ಸುಮ್ಮನಿರಬೇಕೇನು?" ಎಂದು ಕೇಳಿದನು.

ಅದಕ್ಕೆ ಮಂತ್ರಿ "ಮುನಿಗಳ ಮೇಲೆ ಒಂಟಿ ಗಾಲಿ ನಿಂದ ದುಡುಕಿ ಧುಮುಕುವುದು ಒಳ್ಳೆಯದಲ್ಲವೆಂದೇ ನನಗೆ ತೋರುತ್ತದೆ. ಅವರಲ್ಲಿ ತಪಃಶಕ್ತಿ ತುಂಬಿರು ತ್ತದೆ. ಪೂರ್ವದಲ್ಲಿ ವಸಿಷ್ಠನ ಮೇಲೆ ಹೀಗೆಯೇ ಹಾರಿಬಿದ್ದ ವಿಶ್ವಾಮಿತ್ರನು ದೊಡ್ಡ ಪರಾಜಯವನ್ನೆ ತಿಂದನು. ಆ ಏಟಿನಿಂದ ವಿಶ್ವಾಮಿತ್ರನು ರಾಜ್ಯ ವನ್ನೇ ಬಿಟ್ಟು ತಪಶ್ಶಕ್ತಿ ಸಂಪಾದಿಸಲು ಹೋಗಿ ಋಷಿಯಾದನು. ಅದಲ್ಲದೆ ಈಗ ಸುದರ್ಶನನು ಪರಮದೀನ ಪರಿಸ್ಥಿತಿಯಲ್ಲಿದ್ದಾನೆ. ಚಿಕ್ಕಾಸಿಗೂ ಗತಿಯಿಲ್ಲದ ಹುಡುಗ. ನಿಮ್ಮ ಮೇಲೆ ಏರಿಬರುವ ಸಾಧ್ಯತೆಯಾದರೂ ಎಲ್ಲಿದೆ? ಹಾಗೊಂದು ವೇಳೆ ಅವನು ಬಂದಾಗ ನೋಡಿಕೊಂಡರಾಯಿತು. ಅಷ್ಟೇ ಹೊರತು ಈ ಮುನಿಯೊಂದಿಗೆ ತಗಾದೆ ಮಾಡಿ ಕೊಂಡು ಪ್ರಾಣಕ್ಕೆ ಸಂಚಕಾರ ತಂದುಕೊಳ್ಳುವ ಅಗತ್ಯ ವೇನೂ ಇಲ್ಲ." ಎಂದು ಹಿತಬೋಧನೆ ಮಾಡಿದನು.

ತನ್ನ ಮಂತ್ರಿಯ ಮಾತನ್ನು ಅನುಮೋದಿಸಿ ಯುಧಾಜಿತ್ತು ಒಳ್ಳೆಯ ರೀತಿಯಲ್ಲಿ ಭರದ್ವಾಜನ ದರ್ಶನ ಮಾಡಿ, ನಡೆದ ತಪ್ಪಿಗೆ ಕ್ಷಮೆ ಕೇಳಿಕೊಂಡು ತನ್ನ ಮನೆಗೆ ಹೊರಟುಹೋದನು.

ಹೀಗೆ ಬಂದ ಗಂಡವು ತಪ್ಪಿಹೋದ ಮೇಲೆ ಮನೋರಮೆ ಆಶ್ರಮದಲ್ಲಿ ನಿಶ್ಚಿಂತೆಯಾಗಿದ್ದಳು. ಸುದರ್ಶನನು ಕ್ರಮವಾಗಿ ಬೆಳೆದು ಹನ್ನೊಂದು ವರ್ಷ ಪ್ರಾಯದವನಾಗಿ, ಮುನಿಯ ಹತ್ತಿರ ವೇದಗಳನ್ನು ಅಭ್ಯಾಸ ಮಾಡಿದನು. ಹಾಗೆಯೇ ಇತರ ಶಾಸ್ತ್ರ ಗಳನ್ನೂ ಧನುರ್ವೇದವನ್ನೂ ಕಲಿತುಕೊಂಡನು.

ಒಂದು ದಿನ ಸುದರ್ಶನನ ಕನಸಿನಲ್ಲಿ ಲೋಕ ಮಾತೆಯಾದ ಮಹಾದೇವಿ ಕಾಣಿಸಿ, ಅವನಿಗೆ ಅಸ್ತ್ರ ವಿದ್ಯೆಗಳನ್ನು ಉಪದೇಶಿಸಿದಳು. ಅದರಿಂದ ಸುದರ್ಶನನ ವಿದ್ಯಾ ತೇಜಸ್ಸು ಬೆಳಗಿತು.

ಆ ಕಾಲದಲ್ಲಿ ಕಾಶೀರಾಜನ ಮಗಳಾದ ಶಶಿಕಳೆ ಅದ್ಭುತ ಸೌಂದರ್ಯವತಿ ಎಂಬ ಸಂಗತಿ ಸುದರ್ಶನನ

ಕಿವಿಗೆ ಬಿತ್ತು. ಅವಳನ್ನು ಮದುವೆಯಾಗಬೇಕೆಂದು ಅವನಿಗೆ ತೋರಿತು. ಅದೇ ವಿಧವಾಗಿ ಶಶಿಕಳೆ ಭರದ್ವಾಜಾ ಶ್ರಮದಲ್ಲಿರುವ ಸುದರ್ಶನನನ್ನು ಕುರಿತು ಕೇಳಿದ್ದಳು. ಆ ರಾಜಕುಮಾರನ ದೀನಸ್ಥಿತಿಯನ್ನೂ, ವಿದ್ಯಾ ಪ್ರತಿಭೆಯನ್ನೂ ಕೇಳುತ್ತಿದ್ದಂತೆ ತಾನು ಅವ ನನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡಳು.

ಭರದ್ವಾಜಾಶ್ರಮದಲ್ಲಿ ಸುದರ್ಶನನು ಹಗಲಿನಲ್ಲಿ ಶಶಿಕಳೆಯನ್ನೇ ಕುರಿತು ಆಲೋಚಿಸುತ್ತ, ರಾತ್ರಿ ಕನಸಿನಲ್ಲಿ ಅವಳನ್ನೇ ನೋಡುತ್ತ ಕಾಲಕಳೆಯು ತ್ತಿದ್ದನು. ಒಂದು ದಿನ ಅವನಬಳಿಗೆ ಶೃಂಗಿ ಬೇರ ಪುರದ ರಾಜನಾದ ನಿಷಾದನು ಬಂದು ನಾಲ್ಕು ಕುದುರೆಗಳಿರುವ ರಥವನ್ನೂ, ಪತಾಕೆಯನ್ನೂ, ಸಮಸ್ತ ಆಯುಧಗಳನ್ನೂ ಮಿತ್ರಭಾವದಿಂದ ಬಹು ಮಾನವಾಗಿ ಕೊಟ್ಟನು.

ಇದೇ ಸಮಯದಲ್ಲಿ ಭರದ್ವಾಜಾ ಶ್ರಮದೊಳಗಿನ ಮುನಿಗಳು ಸುದರ್ಶನನೊಂದಿಗೆ, "ಇನ್ನು ಮೇಲೆ ನಿನಗೆ ಯಾವ ಕೊರತೆಯೂ ಇಲ್ಲ. ನೀನು ಬೇಗ ದಲ್ಲೇ ರಾಜನಾಗಲಿರುವಿ. ನಿನಗೆ ಲೋಕಮಾತೆ ಯಾದ ಮಹಾದೇವಿಯ ಕಟಾಕ್ಷವಿದೆ. ಅದು ಎಂದಿಗೂ ವೃಥಾ ಹೋಗುವಂತಹುದಲ್ಲ" ಎಂದು ಮನೋರಮೆಯೊಂದಿಗೆ "ಅಮ್ಮಾ, ವೀರಮಾತಾ! ನಿನ್ನ ಮಗನು ರಾಜನಾಗುವುದು ನಿಶ್ಚಯ!" ಎಂದರು.

"ನಿಮ್ಮ ಆಶೀರ್ವಾದ ಬಲದಿಂದ ಹಾಗೆಯೇ ಆಗಲಿ! ಏನೋ ಯಾರಿಗೆ ಗೊತ್ತು? ಯಾರೊಬ್ಬರ ಸಹಾಯವೂ ಇಲ್ಲದ ನನ್ನ ಮಗನು ರಾಜನಾಗುವ ಬಗೆ ಹೇಗೋ? ನಿಮ್ಮ ಆಶೀರ್ವಾದವೇ ಎಲ್ಲಕ್ಕೂ ಹೆಚ್ಚಿನ ಸಹಾಯ!" ಎಂದು ಮನೋರಮೆ ತನ್ನ ಮನಸ್ಸಿನಲ್ಲೇ ಸಂತೋಷದಿಂದ ಉಬ್ಬಿದಳು. ಹೇಗಾದರೂ ಬದುಕಿಕೊಂಡಿದ್ದರೆ ಒಂದು ದಿನ, ಸಂತೋಷದಕಾಲ ಮೂಡುತ್ತದೆಂಬ ಮಾತನ್ನು



ಅವಳು ಕೇಳಿದ್ದಳು. ಅದನ್ನೇ ನಂಬಿದ್ದಳು. ಅದಕ್ಕೆ ತಕ್ಕಕಾಲ ಬರುವುದೋ ಏನೋ?

ಸುದರ್ಶನನು ತನ್ನ ರಥದ ಮೇಲೇರಿ ಎಲ್ಲಿ ತಿರುಗಿ ದರೂ ಅವನ ಸುತ್ತಲೂ ಒಂದು ಅಕ್ಷೌಹಿಣಿ ಸೇನೆ ಇರುವ ಹಾಗೆ ಕಾಣುತ್ತಿತ್ತು. ಸುದರ್ಶನನ ಮೇಲೆ ಮನಸ್ಸು ನಿಲ್ಲಿಸಿದ ಶಶಿಕಳೆ ಮಾತ್ರ ಅನ್ನಾಹಾರಗಳಲ್ಲಿ ಇಷ್ಟವಿಲ್ಲದೆ ಕೃಶಳಾಗ ತೊಡಗಿದಳು. ಅವಳ ಚಿಂತೆ ಯನ್ನು ಸ್ವಲ್ಪ ಮಟ್ಟಿಗೆ ಗ್ರಹಿಸಿದ ತಂದೆ ಸುಬಾಹು ರಾಜನು ಅವಳಿಗೆ ಸ್ವಯಂವರ ಮಾಡಲು ನಿಶ್ಚಯಿಸಿ ಎಲ್ಲಾ ರಾಜರಿಗೂ ವರ್ತಮಾನ ಕಳುಹಿಸಿದನು.

ಸ್ವಯಂವರದಲ್ಲಿ ಪಣಸ್ವಯಂವರ, ಶುಲ್ಕ ಸ್ವಯಂವರ, ಇಚ್ಛಾಸ್ವಯಂವರ ಎಂಬ ಮೂರು ಬಗೆಗಳಿದ್ದುವು. ರಾಮನು ಶಿವಧನುರ್ಭಂಗ ಮಾಡಿ ಸೀತೆಯನ್ನು ವರಿಸಿಕೊಂಡುದು ಪಣಸ್ವಯಂವರದಲ್ಲಿ! ಸುಬಾಹು ತನ್ನ ಮಗಳಿಗೆ ನಿಶ್ಚಯಿಸಿದುದು ಇಚ್ಛಾ ಸ್ವಯಂವರವನ್ನೇ.

ಯಾರು ಯಾರು ಸ್ವಯಂವರಕ್ಕೆ ಬಂದಿರುವರೆಂಬುದನ್ನು ಆಗಿಂದಾಗ ತಿಳಿದುಕೊಳ್ಳುತ್ತಿದ್ದ ಶಶಿಕಳೆ ಕಣ್ಣೀರು ತುಂಬಿ ತನ್ನ ಸಖಿಯೊಂದಿಗೆ, "ಇವರೆಲ್ಲಾ ಯಾಕೆ ಬರಬೇಕು ? ನಾನು ಸುದರ್ಶನನ ಹೊರತು ಬೇರೊಬ್ಬನನ್ನು ಹೇಗೆ ಮದುವೆಯಾಗಲಿ ? ಧನವೂ ರಾಜ್ಯಗಳೂ ನನಗೇಕೆ ಸುಡಲಿಕ್ಕೋ ? ಮದುವೆಯಾದರೆ ಪ್ರಜ್ಞಾ ಪ್ರಭಾವವಿರುವ ಸುದರ್ಶನನೊಬ್ಬನನ್ನೇ ಆಗಬೇಕು. ಅವನೊಬ್ಬನೇ ನನಗೆ ತಕ್ಕವನು ! ಬೇರೆ ಯಾರೂ ಅಲ್ಲ !" ಎಂದಳು.

ಅವಳ ಸಖಿ ಅವಳ ಅಭಿಪ್ರಾಯವನ್ನು ಒಯ್ದು ರಾಣಿಗೆ ಹೇಳಿದಳು : "ಅಮ್ಮಾ ! ನಮ್ಮ ಶಶಿಕಳೆ ತನ್ನ ಮನಸ್ಸನ್ನು ಸುದರ್ಶನನೆಂಬವನಿಗೆ ಧಾರೆಯೆರೆದು ಬಿಟ್ಟಿದ್ದಾಳೆ. ಅವನು ಮಹಾಮುನಿ ಭರದ್ವಾಜಾಶ್ರಮದಲ್ಲಿ ಇರುವವನಂತೆ."

ಈ ಮಾತನ್ನು ಕೇಳಿ ರಾಣಿ ಅದನ್ನು ಗಂಡನಿಗೆ ತಿಳಿಸಿದಳು. ಅದನ್ನು ಕೇಳಿ ಸುಬಾಹು ರಾಜನು ರಾಣಿಯೊಂದಿಗೆ, "ಆ ಸುದರ್ಶನನ ಸಂಗತಿ ಪೂರಾ ನನಗೆ ಗೊತ್ತಿದೆ. ಅವನು ರಾಜ್ಯಭ್ರಷ್ಟನಾಗಿ ತಿನ್ನಲು ಗತಿಯಿಲ್ಲದೆ ಅರಣ್ಯದಲ್ಲಿ ತಾಯಿಯೊಂದಿಗೆ ಮುನಿಗಳ ಕೊಂಪೆಯಲ್ಲಿ ಇರುವವನು. ಅಂಥವನಿಗೆ ನಮ್ಮ ಹುಡುಗಿಯನ್ನು ಕೊಡುವುದೆಂದರೇನು ? ಅದೃಷ್ಟಶಾಲಿಗಳಾಗಿ, ಭಾಗ್ಯವಂತರಾದ ರಾಜಕುಮಾರರು ಸಾವಿರಾರು ಮಂದಿ ಇದ್ದಾರೆ. ಹುಡುಗಿಯ ಮನಸು ಬದಲಾಯಿಸುವ ಹಾಗೆ ಬುದ್ಧಿ ಹೇಳು," ಎಂದನು.

ರಾಣಿ ಅದಕ್ಕೆ ಒಪ್ಪಿ. ಶಶಿಕಳೆಯ ಬಳಿಗೆ ಹೋಗಿ ಅವಳನ್ನು ಬಾಚಿತಬ್ಬಿಲಲ್ಲಿಗೆಯುಟ್ಟು. "ಮಗಳೇ, ನೀನು ಬಯಸುವ ಆ ಸುದರ್ಶನನು ಅರಣ್ಯದಲ್ಲಿ ಕಂದಮೂಲಗಳನ್ನು ತಿನ್ನುತ್ತ ದೀನಸ್ಥಿತಿಯಲ್ಲಿ, ಬಂಧುಗಳಾರಿಗೂ ಬೇಡದವನಾಗಿ. ಜನಬಲ ಧನಬಲಗಳೇನೂ ಇಲ್ಲದ ನಿರ್ಭಾಗ್ಯದವನು. ಎಷ್ಟೋ ದೊಡ್ಡ ದೊಡ್ಡ ರಾಜಕುಮಾರರು ನಿನಗಾಗಿ ಬಂದಿದ್ದಾರೆ. ಹಾಗೆ ಬಂದವರಲ್ಲಿ ಆ ಸುದರ್ಶನನ ತಮ್ಮನೇ ಇದ್ದಾನೆ. ತುಂಬಾ ಸುಂದರನಾಗಿದ್ದಾನೆ. ಬಲಶಾಲಿಯಾಗಿಯೂ ಬುದ್ಧಿಶಾಲಿಯಾಗಿಯೂ, ತುಂಬ ಚೆನ್ನಾಗಿ ರಾಜ್ಯಪಾಲನೆ ಮಾಡುತ್ತಾನೆ. ಅವನ ಹೆಸರು ಶತ್ರುಜಿತ್ತು. ನಿನಗೆ ಸರಿಯಾದ ಜೋಡಿ ಆತನೇ. ಇವನಿಗಾಗಿ ತಾನೇ ಇವನ ತಾತ ಕಳಿಂಗ ರಾಜನನ್ನು ಕೊಂದನು ? ಸಂದರ್ಭ ಸಿಕ್ಕಿದ ಕೂಡಲೇ ಇವನ ತಾತ ಯುಧಾಜಿತ್ತು ಈ ಸುದರ್ಶನನನ್ನು ಖಂಡಿತಾ ಕೊಲ್ಲುತ್ತಾನೆ. ಆ ಭಯದಿಂದಲೇ ಅವನು ಭರದ್ವಾಜಾಶ್ರಮದಲ್ಲಿ ಅಡಗಿದ್ದಾನೆ ಗೊತ್ತಾ? ನಿನ್ನ ತಂದೆ ಅಂಥವನಿಗೆ ನಿನ್ನನ್ನು ಎಷ್ಟು ಮಾತ್ರಕ್ಕೂ ಕೊಡಲಾರರು. ಆದುದರಿಂದ ಗತಿ ಗೇಡಿಯಾದ ಸುದರ್ಶನನ ಆಲೋಚನೆಯನ್ನು ಬಿಟ್ಟುಬಿಡು." ಎಂದಳು.





# ಕನ್ಯಾಲಾಭ

ಒಂದು ಊರಿನಲ್ಲಿ ವೆಂಕಯ್ಯ ಎಂಬವನಿಗೆ ನಾಗರಾಜನೆಂಬ ಒಬ್ಬ ಮಗನಿದ್ದ. ಅವನು ಪ್ರಾಯಕ್ಕೆ ಬಂದುದನ್ನು ನೋಡಿ, ಅವನಿಗೆ ಮದುವೆ ಮಾಡಬೇಕೆಂದು ವೆಂಕಯ್ಯನಿಗೆ ತೋರಿತು. ಆದರೆ ನಾಗರಾಜನ ಕೆಟ್ಟ ಗುಣ ಆ ಊರಿನಲ್ಲಿ ಸುತ್ತು ಮುತ್ತಲಿದ್ದವರಿಗೆ ಗೊತ್ತಿತ್ತು. ಅವನು ಸ್ವೇಚ್ಛೆಯಾಗಿ ತಿರುಗುತ್ತ, ಆಗಾಗ ಚಿಕ್ಕಪುಟ್ಟ ಕಳ್ಳತನಗಳನ್ನು ಕೂಡಾ ಮಾಡುತ್ತಿದ್ದನು. ಆದುದರಿಂದ ಅವನ ಪರಿಚಿತರಾರೂ ಅವನಿಗೆ ಹುಡುಗಿ ಕೊಡಲು ಒಪ್ಪಲಿಲ್ಲ. ಊರೊಳಗೆ ತನ್ನ ಮಗನ ಕೀರ್ತಿ ಅಷ್ಟರ ಮಟ್ಟಿಗೆ ಇರುವುದನ್ನು ನೋಡಿ, ವೆಂಕಯ್ಯ ಬೇಸರದಿಂದ ಮಗನೊಂದಿಗೆ, "ನಿನಗೊಂದು ಹುಡುಗಿಯನ್ನು ತಂದು ಮದುವೆ ಮಾಡುವುದು ನನ್ನಿಂದಾಗದು. ಅದರ ಮೇಲೆ ನನ್ನ ಮರ್ಯಾದೆಯೇ ಮೂರು ಕಾಸಾಗುತ್ತದೆ. ನೀನು ಎಲ್ಲಿಗಾದರೂ ಹೋಗಿ ಮರ್ಯಾದೆ ಸಂಪಾದಿಸಿ, ಮದುವೆಕೂಡಾ ಮಾಡಿಕೊಂಡು ಬರುವವರೆಗೆ ಈ ಮನೆಗೆ ಕಾಲಿಡಬೇಡ. ಹೋಗಿಬಿಡು" ಎಂದು ಹೇಳಿ ಮನೆಯಿಂದ ಹೊರಡಿಸಿಬಿಟ್ಟನು.

ನಾಗರಾಜನು ತನ್ನ ಊರು ಮನೆ ಬಿಟ್ಟು, ಆ ಪ್ರಾಂತದಿಂದಲೇ ಹೊರಟು ಬೇರೊಂದು ಊರಿಗೆ ಹೋದನು. ಅಲ್ಲಿ ತನ್ನ ಹೊಟ್ಟೆ ಖರ್ಚಿಗೆ ದಾರಿ ಕಾಣದೆ. ತನಗೆ ತಿಳಿದಿದ್ದ ಕಳ್ಳತನವೇಗತಿ ಎಂದುಕೊಂಡು ಒಂದು ಮನೆಯೊಳಗೆ ಪ್ರವೇಶಿಸಿದನು. ಅದು ಹೊನ್ನಮ್ಮ ಎಂಬ ಒಬ್ಬಳು ವಿಧವೆಯ ಮನೆ. ಅವಳಿಗೆ ಗೌರಿ ಎಂಬ ಹೆಸರಿನ ಒಬ್ಬಳೇ ಒಬ್ಬಳು ಮಗಳು ಮಾತ್ರ ಇದ್ದಳು. ತನ್ನ ಮಗಳನ್ನು ತಕ್ಕ ಹುಡುಗನಿಗೆ ಕೊಟ್ಟು ಮದುವೆ ಮಾಡಬೇಕೆಂದು ಹೊನ್ನಮ್ಮನ ಆಶೆ. ಅದಕ್ಕಾಗಿ ಅವಳು ಹೂವು, ಹಾಲು, ಮೊಸರು, ಕೋಳೀ ಮೊಟ್ಟೆ, ಬೆರಣಿ ಮುಂತಾದುವನ್ನು ಮಾರಿ, ಆಗಾಗ ಒಂದೊಂದು ನಗವನ್ನು ಮಾಡಿಸಿ, ಅವುಗಳನ್ನು ಒಂದು ಪೆಟ್ಟಿಗೆಯಲ್ಲಿ ಅಡಗಿಸಿಡುತ್ತಿದ್ದಳು.

ಕಳ್ಳತನಕ್ಕಾಗಿ ಆ ಮನೆಯೊಳಗೆ ತಡಕಾಡುವ ನಾಗರಾಜನಿಗೆ ಆ ನಗಗಳು ಸಿಕ್ಕಿದುವು. ಅವನು ಅವುಗಳನ್ನು ಅಪಹರಿಸಿಕೊಂಡು ಹೊರಬಿದ್ದು, ಊರ ಹೊರಗೆ ದಿಣ್ಣೆಯಮೇಲಿದ್ದ ಒಂದು ಸಣ್ಣ ಗುಡಿಯ ಮುಂದೆ ಹೊಂಡತೆಗೆದು ಅದರೊಳಗೆ ಅಡಗಿಸಿಟ್ಟು,

ಕೆ. ಸದಾನಂದ



ಮೇಲೆ ಮಣ್ಣು ಮುಚ್ಚಿದನು. ಆಮೇಲೆ ಯಾರೂ ತನ್ನ ಗುರುತು ಹಿಡಿಯದಂತೆ ಸನ್ಯಾಸಿಯ ವೇಷವನ್ನು ಹಾಕಿಕೊಂಡನು.

ಮರುದಿನ ಗೌರಿ ಹೂವುಗಳನ್ನು ಮಾರಿಕೊಂಡು ಬರಲು ಸಂತೆಗೆ ಹೋದಳು. ಆ ಊರಿನಲ್ಲಿ ಈ ಗೌರಿಯ ಮೇಲೆ ಕಣ್ಣಿಟ್ಟಿದ್ದ ಒಬ್ಬ ದುಷ್ಟನಿದ್ದನು. ಅವನ ಹೆಸರು ಗುರುಗುಮ್ಮ. ಕುಡುಕನೂ, ಜೂಜುಗಾರನೂ ಆದ ಅವನು ಸ್ವಲ್ಪಕಾಲದಿಂದ ಗೌರಿಯ ಮೇಲೆ ಗುರಿಯಿಟ್ಟು, ಅವಳನ್ನು ತನಗೆ ಕೊಟ್ಟು ಮದುವೆ ಮಾಡುವಂತೆ ಅನೇಕ ಸಾರಿ ಹೊನ್ನಮ್ಮನನ್ನು ಕಾಡುತ್ತಿದ್ದನು. ಅವನ ಹಾಳು ಬುದ್ಧಿಯನ್ನು ಅರಿತಿದ್ದ ಹೊನ್ನಮ್ಮ ಅವನನ್ನು ತಿರಸ್ಕರಿಸುತ್ತಾ ಬಂದಿದ್ದಳು. ಹೇಗಾದರೂ ಗೌರಿಯನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ಗುರುಗುಮ್ಮನು ಹಟ ಹಿಡಿದು ಸಮಯ ಕಾಯುತ್ತಿದ್ದನು. ಸಾಯಂಕಾಲದ ಹೊತ್ತಿನಲ್ಲಿ ಗೌರಿ ಸಂತೆಯಿಂದ ಮನೆಗೆ ಹಿಂದಿರುಗುವಾಗ ಕಾಯುತ್ತಿದ್ದ ಗುರುಗುಮ್ಮನಿಗೆ ಅವಕಾಶ ಸಿಕ್ಕಿತು. ಅವನು ಕೆಲವು ದುಷ್ಟರ ಸಹಾಯದಿಂದ ಗೌರಿಯನ್ನು ಎತ್ತಿಕೊಂಡು, ಅವಳೆಷ್ಟು ಅತ್ತು, ಕೂಗಿ ರಂಪಮಾಡಿದರೂ ಕೇಳದೆ, ದಿಣ್ಣೆಯ ಗುಡಿಗೇ ಒಯ್ದನು. ಅಲ್ಲಿ ಅವಳ ಕೊರಳಿಗೆ ಬಲವಂತವಾಗಿ ತಾಳಿ ಕಟ್ಟಲು ತಯಾರಾದನು.

ಗುಡಿ ಮಂಟಪದ ಮೂಲೆಯಲ್ಲಿ ಕುಳಿತಿದ್ದ ನಾಗರಾಜ ಸನ್ಯಾಸಿ ಅದನ್ನೆಲ್ಲಾ ನೋಡಿ, ಗೌರಿಯನ್ನು ಕಾಪಾಡಲು ನಿಶ್ಚಯಿಸಿ, ಎದ್ದು ಒಳಗೆ ಬಂದು, "ಏನ್ರೋ ಇದು ಗಡಿಬಿಡಿ ಗಲಾಟೆ?" ಎಂದನು.

"ಕುಡಿಯುವ ನೀರಿನಲ್ಲಿ ಕಡ್ಡಿ ಅಡ್ಡ ಬಂದ ಹಾಗೆ ನೀನೇಕೆ ಇಲ್ಲಿ?" ಎಂದು ಗುರುಗುಮ್ಮನು ಕಣ್ಣು ಕೆಂಪು ಮಾಡಿದನು.

ನಾಗರಾಜನು ದೊಡ್ಡ ಕಣ್ಣುಗಳಿಂದ ಅವನ ಮುಖವನ್ನು ನೋಡಿ, ಆಶ್ಚರ್ಯವನ್ನು ನಟಿಸುತ್ತ, "ಆಹಾ! ಏನು ಅದೃಷ್ಟ ಜಾತಕ ನಿನ್ನದು? ನೀನು ಮುಟ್ಟಿದ್ದು ಬಂಗಾರವಾಗುತ್ತದಪ್ಪಾ. ಸಿರಿ ನಿನ್ನ ಕಾಲಹಿಂದೆಯೇ ಬಂದು ಹೊರಗೆ ಕಾದಿದ್ದಾಳೆ!" ಎಂದನು.

"ನಿನ್ನ ಮುಖ! ನಡೆಯಾಚೆ!" ಎಂದ ಗುರುಗುಮ್ಮ ಕೋಪದಿಂದ. "ಎಲೋ ಅವಿವೇಕಿಯೇ! ನಾನು ತಮಾಷೆ ಮಾಡುತ್ತಿದ್ದೇನೆಂದು ಕೊಂಡೆಯಾ? ನೀನು ಕಾಲಿಟ್ಟು ಬಂದ ಆ ಸ್ಥಳದಲ್ಲಿ ಅಗೆದು ನೋಡಿ, ಮತ್ತೆ ಮಾತಾಡು!" ಎಂದನು ನಾಗರಾಜ ದರ್ಪದಿಂದ.

ಗುರುಗುಮ್ಮನು ಗುಡಿಯ ಹೊರಗೆ ಸನ್ಯಾಸಿ ತೋರಿಸಿದ ಸ್ಥಳದಲ್ಲಿ ಅಗೆದು ನೋಡಿದನು. ನಾಗರಾಜನು ಹುಗಿದಿಟ್ಟ ನಗಗಳು ಅವನ ಕಣ್ಣಿಗೆ ಬಿದ್ದು, ಕೈಗೂ ಸಿಕ್ಕಿತು. ಅವನು ಅವುಗಳನ್ನು ತನ್ನ ಜೇಬಿಗಿಳಿಸಿಕೊಂಡು, ನಾಗರಾಜನ ಕಡೆಗೆ ತಿರುಗಿ, "ನೀವು

ನಿಜವಾಗಿಯೂ ಮಹಾತ್ಮರು!" ಎಂದು ಕೈಮುಗಿದನು. ತರುವಾಯ ನಾಗರಾಜನು ಗೌರಿಯ ಮುಖವನ್ನು ನೋಡಿ, "ಯಾರಿವಳು ಚಕ್ಕಿಣಿ ಬಡೆದ ಮುಖದವಳು ?" ಎಂದನು.

"ಹಾಗೆ ಹೇಳುವಿರೇಕೆ?" ಎಂದು ಗುರುಗುಮ್ಮನು ಆಶ್ಚರ್ಯದಿಂದ ಕೇಳಲು, "ಮತ್ತೇನು? ಇವಳದು ಪೂರ್ತಿ ನಷ್ಟಜಾತಕ. ಇವಳನ್ನು ಮದುವೆ ಮಾಡಿಕೊಂಡವನು ಮೂರು ದಿನದೊಳಗೆ ಸಾಯುತ್ತಾನೆ." ಎಂದ ನಾಗರಾಜ.

ಆ ಮಾತು ಕೇಳಿದ ಕೂಡಲೇ ಗುರುಗುಮ್ಮನಿಗೆ ಹಿಡಿದ ಗೌರಿಯ ಭ್ರಮೆ ಮಿಂಚು ಬಡೆದಂತೆ ಜರ್ರನೆ ಜಾರಿಹೋಯಿತು. ವಿರಕ್ತಿ ತಾಳಿ, ಗೌರಿಯನ್ನು ಮನೆಗೆ ಹೋಗುವಂತೆ ಹೇಳಿ ಬಿಟ್ಟುಬಿಟ್ಟನು.

ಮರುದಿನ ಬೆಳಿಗ್ಗೆ ನಾಗರಾಜನು ಗೌರಿಯ ಮನೆಗೆ ಹೋದನು. ಆ ಸಮಯದಲ್ಲಿ ಹೊನ್ನಮ್ಮ ಮನೆಯಲ್ಲಿರಲಿಲ್ಲ. ಗೌರಿ ಸನ್ಯಾಸಿಗೆ ನಮಸ್ಕಾರ ಮಾಡಿ ಒಳಗೆ ಕರೆದಳು.

"ಮೊನ್ನೆ ರಾತ್ರಿ ಈ ಮನೆಯಲ್ಲಿ ಕಳ್ಳತನವಾದ ಸಂಗತಿಯೂ, ನಿನ್ನೆ ಆ ಗುರುಗುಮ್ಮನಿಗೆ ಗುಡಿಯ ಹತ್ತಿರ ಸಿಕ್ಕಿದ ನಗಗಳು ಈ ಮನೆಯದೇ ಎಂಬ ಸಂಗತಿಯೂ ನಿನಗೆ ಗೊತ್ತಿದೆಯೋ ?" ಎಂದು ನಾಗರಾಜನು ಗೌರಿಯನ್ನು ಕೇಳಿದನು.

"ಅದೇನೂ ಗೊತ್ತಿಲ್ಲವಲ್ಲಾ!" ಎಂದಳು ಗೌರಿ ಆಶ್ಚರ್ಯದಿಂದ. ನಾಗರಾಜನು ತನ್ನ ಸನ್ಯಾಸಿ ವೇಷ ತೆಗೆದು ಹಾಕಿ, ತನ್ನನ್ನು ಕುರಿತು, ತಾನು ಮಾಡಿದ ಕಳ್ಳತನವನ್ನು ಕುರಿತು, ಏನೂ ಮರೆ ಮಾಚದೆ ಎಲ್ಲವನ್ನೂ ಅವಳೊಂದಿಗೆ ಹೇಳಿದನು.

"ಅದೆಲ್ಲಾ ಒಳ್ಳೇದೇ ಆಯಿತು. ಇನ್ನು ಮೇಲೆ ನೀನು ಕಳ್ಳತನ ಬಿಡುವುದಾದರೆ ನಿನ್ನನ್ನೇ ಮದುವೆಯಾಗುತ್ತೇನೆ." ಎಂದಳು ಗೌರಿ. ಇನ್ನೆಂದೂ ಕಳ್ಳತನ ಮಾಡಲಾರೆನೆಂದು ನಾಗರಾಜನು ಪ್ರಮಾಣ ಮಾಡಿ ಹೇಳಿದನು.

ಹೊನ್ನಮ್ಮ ಮಗಳ ಮೂಲಕ ಎಲ್ಲಾ ಸಂಗತಿಯನ್ನೂ ತಿಳಿದು, ಗುರುಗುಮ್ಮ ತನ್ನ ಮನೆಯ ನಗಗಳನ್ನು ಕದ್ದನೆಂದು ಗ್ರಾಮಾಧಿಕಾರಿಯೊಂದಿಗೆ ಫಿರ್ಯಾದಿ ಮಾಡಿದಳು. ಗ್ರಾಮಾಧಿಕಾರಿ ಗುರುಗುಮ್ಮನನ್ನು ಶೋಧಿಸಿ ಹೊನ್ನಮ್ಮನ ನಗಗಳನ್ನು ಅವಳಿಗೆ ಕೊಡಿಸಿ, ಗುರುಗುಮ್ಮನಿಗೆ ಜುಲುಮಾನೆ ವಿಧಿಸಿದನು. ತರುವಾಯ ನಾಗರಾಜನು ಗೌರಿಯನ್ನು ಮದುವೆಯಾಗಿ ಅವಳೊಂದಿಗೆ ತನ್ನ ಊರಿಗೆ ಹೋಗಿ, ಮನೆಯ ಬಾಗಿಲು ತಟ್ಟಿದನು. "ನೀವು ಹೇಳಿದಂತೆಯೇ ಬಂದಿದ್ದೇನೆ ಅಪ್ಪಾ!" ಎಂದನು ತಂದೆಯೊಂದಿಗೆ. ವೆಂಕಯ್ಯ ಮಗನನ್ನೂ ಸೊಸೆಯನ್ನೂ ಮನೆಯೊಳಗೆ ಸ್ವಾಗತಮಾಡಿಕೊಂಡನು.





# ಬಣ್ಣದ ಭ್ರಮೆ

ಮೋಘಪುರದ ರಾಜನಿಗೆ ರೂಪಕುಮಾರಿ ಎಂಬ ಒಬ್ಬಳು ಮಗಳಿದ್ದಳು. ಅವಳಿಗೆ ವಿವಾಹದ ವಯಸ್ಸೂ ಬಂದಿತು. ಅವಳ ಸೌಂದರ್ಯವು ಅಸಾಧಾರಣವಾದುದೆಂದು ಕೇಳಿ ದೊಡ್ಡ ದೊಡ್ಡ ರಾಜರೂ, ಅನೇಕ ದೇಶಗಳ ರಾಜಕುಮಾರರೂ ಅವಳನ್ನು ಮದುವೆಯಾಗಲು ತವಕಿಸಿದರು. ಆದರೆ ರೂಪಕುಮಾರಿಯ ತಂದೆಗೆ ತನ್ನ ಕುಮಾರಿಯನ್ನು ಮಣಿಪುರದ ರಾಜನಾದ ಶ್ರೀಕುಮಾರನಿಗೇ ಮದುವೆ ಮಾಡಿ ಕೊಡಬೇಕೆಂದಿದ್ದಿತು. ಶ್ರೀಕುಮಾರನು ಸಕಲ ಸದ್ಗುಣ ಸಂಪನ್ನನು ಮಾತ್ರವಲ್ಲದೆ, ಅವನ ಮಾತಾ ಮಹನ ಅನಂತರ ಅವನು ಪಾಲಿಸುವ ಮಾನಾ ಸಂಸ್ಥಾನಕ್ಕೆ ಕೂಡಾ ರಾಜನಾಗಲಿದ್ದಾನೆ.

ಹೀಗೆ ಶ್ರೀಕುಮಾರನು ಒಳ್ಳೆಯ ಅದೃಷ್ಟ ಜಾತಕದವನಾದರೂ ಅವನಲ್ಲಿ ಒಂದೇ ಒಂದು ಲೋಪ ವಿದ್ದಿತು. ಅವನ ಶರೀರ ಛಾಯೆ ಕಪ್ಪು. ಆದರೆ ಅವನು ಜನ್ಮತಃ ಕಪ್ಪು ಬಣ್ಣದವನಾಗಿರಲಿಲ್ಲ. ಬಂಗಾರದ ಬಣ್ಣದಲ್ಲೇ ಇದ್ದವನು. ಆರು ವರ್ಷಗಳ ಕೆಳಗೆ ಅವನು ಸಪರಿವಾರವಾಗಿ ಬೇಟೆಗೆ ಹೋದಾಗ, ಹಾವು ಕಡಿದು, ಪ್ರಾಣದಿಂದ ಬದುಕಿ ಉಳಿದು ಶರೀರವು ಕಪ್ಪಾಗಿಬಿಟ್ಟಿತ್ತು. ಇದು ಕಾಲಕ್ರಮೇಣ ಹೋಗಿಬಿಡುವುದೆಂದು ವೈದ್ಯರು ಹೇಳಿದ್ದರು. ಕೆಲವು ವರ್ಷಗಳಲ್ಲಿ ಅವನಿಗೆ ಸಹಜ ವರ್ಣ ಬರುವುದಂತೆ.

ರೂಪಕುಮಾರಿಗೆ ಕಪ್ಪು ಬಣ್ಣದ ಮೇಲೆ ಇಷ್ಟ ವಿರಲಿಲ್ಲ. ಮಂತ್ರಿ ಧೀಮಂತನು ರಾಜನ ಅಭಿಪ್ರಾಯಕ್ಕೆ ಅನುಕೂಲವಾಗಿ ಅವಳ ಮನಸ್ಸನ್ನು ಬದಲಾಯಿಸಲು ಬಹಳ ಪ್ರಯತ್ನ ಮಾಡಿದನು. ಆಗ ಅವಳು ನಿರ್ದಾಕ್ಷಿಣ್ಯವಾಗಿ ಹೀಗೆಂದಳು :

"ನಾನು ಖಂಡಿತವಾಗಿಯೇ ಹೇಳುತ್ತೇನೆ. ಕಪ್ಪು. ಶರೀರದವನನ್ನು ನಾನು ಮದುವೆಯಾಗಲಾರೆ. ನನಗೆ ಕಪ್ಪಗಿನ ಮಕ್ಕಳೇ ಹುಟ್ಟಿದರೆ ಸಹಿಸಲಾಗದು."

"ಹೀಗೆ ಹೇಳಬಾರದಮ್ಮಾ, ಮಕ್ಕಳು ಕರ್ರಗಿದ್ದ ಮಾತ್ರಕ್ಕೆ ಮಕ್ಕಳಲ್ಲದೆ ಹೋಗುವರೆ ? ಶರೀರ ಕಪ್ಪಾದರೂ ಗುಣ ಕಪ್ಪೆ ? ಕಪ್ಪುದನದ ಹಾಲು ಕಪ್ಪಾಗಿರುತ್ತದೇನು? ಮನುಷ್ಯನಿಗೆ ಮನಸ್ಸೂ ಸ್ವಭಾವವೂ ಮುಖ್ಯವಾದುದಲ್ಲವೆ ? ಬಣ್ಣವು ಕೇವಲ ಕಣ್ಣಿಗೆ ಗೋಚರಿಸುವ ಒಂದು ಭ್ರಮೆ. ಆ ಭ್ರಮೆ ಸುಳ್ಳಾಗಿ ಹೋಗುವುದೂ ಉಂಟು. ನಿನಗೊಂದು ವಿಚಿತ್ರವನ್ನು ತೋರಿಸುತ್ತೇನೆ !" ಎಂದನು ಧೀಮಂತ.

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಅವನು ಚಪ್ಪಾಳೆ ತಟ್ಟಿದ ಕೂಡಲೇ ರೂಪ ಕುಮಾರಿಯ ಕೋಣೆಗೆ ಒಬ್ಬ ಸೇವಕನು ಒಂದು, ಬಟ್ಟೆ ಮುಚ್ಚಿದ ಹರಿವಾಣವನ್ನು ತಂದು ಮೇಜಿಯ ಮೇಲಿಟ್ಟನು. ಇನ್ನೊಂದುಬದಿಯಿಂದ ಆ ಕೋಣೆ ಯೊಳಗೆ ರಾಜನೂ ರಾಣಿಯೂ ಬಂದರು.

ಧೀಮಂತನು ಹರಿವಾಣದ ಮೇಲಿನ ಬಟ್ಟೆಯನ್ನು ತೊಲಗಿಸುತ್ತ, "ಅಮ್ಮಾ, ಇದೀಗ ನಿನ್ನ ದೃಷ್ಟಿ ಗೊಂದು ಪರೀಕ್ಷೆ. ಈ ಹರಿವಾಣದ ಮೇಲೆ ಗಾಜಿನ ಗ್ಲಾಸಿನಲ್ಲಿ, ನಮ್ಮ ಐಂದ್ರಜಾಲಿಕ ಸೋಮನಾಥನು ಸುರಿದಿಟ್ಟ ಮಂತ್ರದ ನೀರಿದೆ. ಅದರೊಳಗಿರುವ ಎರಡು ಚಮಚಗಳಲ್ಲಿ ಹೊಳಪು ಕಡಿಮೆಯಾಗಿರುವ ಚಮಚವನ್ನು ಮೇಲಕ್ಕೆತ್ತು." ಎಂದನು.

ಗ್ಲಾಸಿನ ನೀರಿನಲ್ಲಿರುವ ಚಮಚಗಳಲ್ಲಿ ಒಂದು ಚಮಚವು ತಳತಳನೆ ಹೊಳೆಯುತ್ತಿದ್ದಿತು. ಎರಡನೆ ಯದು ಹೊಳಪಿಲ್ಲದ ಸಾಧಾರಣ ಚಮಚವಾಗಿತ್ತು. ರೂಪಕುಮಾರಿ ಆ ಎರಡನೇ ಚಮಚವನ್ನೇ ಮೇಲಕ್ಕೆ ಎತ್ತಿದಳು.

"ಈಗ ಹೊಳೆಯುವ ಚಮಚವನ್ನು ಮೇಲಕ್ಕೆ ತೆಗೆ" ಎಂದ ಮಂತ್ರಿ ಧೀಮಂತ.

ರೂಪಕುಮಾರಿ ಎರಡನೇ ಚಮಚವನ್ನು ಮೇಲಕ್ಕೆ ಎತ್ತಿ ಬೆರಗಾಗಿ ಹೋದಳು. ಅವಳ ಕಣ್ಣುಗಳು ಇಷ್ಟಗಲವಾದುವು. ಅದು ಮಸಿಬಡಿದಂತೆ ಕಪ್ಪಗಿನ ಚಮಚವಾಗಿತ್ತು! ಧೀಮಂತನು ಅದನ್ನು ಮತ್ತೆ ಗ್ಲಾಸಿನೊಳಗೆ ಹಾಕಲು ಹೇಳಿದನು. ಅವಳು ಮತ್ತೆ ಅದನ್ನು ಗ್ಲಾಸಿನ ನೀರಿಗೆ ಹಾಕಿದಳು. ಕೂಡಲೇ ಅದು ತಳತಳನೆ ಹೊಳೆಯಿತು. ಬೆಳ್ಳಿಕೂಡಾ ಅಷ್ಟು ಹೊಳೆಯದು.

ಧೀಮಂತನು ಅವಳೊಂದಿಗೆ "ನೋಡಿದೆಯೇ ನಮ್ಮಾ? ಕಪ್ಪಗಿನ ವಸ್ತುಗಳು ಕೂಡಾ ಅದ್ಭುತವಾಗಿ ಹೊಳೆಯಬಲ್ಲವು. ಬಣ್ಣವೆಂಬುದು ಕೇವಲ ದೃಷ್ಟಿಗೆ ಸಂಬಂಧಪಟ್ಟದ್ದು. ಅದು ಮುಖ್ಯವಾದ ಗುಣವಂತೂ ಅಲ್ಲ. ಶ್ರೀಕುಮಾರನಲ್ಲಿ ಎಷ್ಟೋ ಸುಗುಣಗಳ ಹೊಳಪುಗಳಿವೆ. ನಾನು ಅವನನ್ನು ಚೆನ್ನಾಗಿ ಪರೀಕ್ಷಿಸಿ ತಿಳಿದಿದ್ದೇನೆ. ಅವನಿಗಿಂತ ಒಳ್ಳೆಯ ವರನು ನಿನಗೆ ದೊರೆಯಲಾರನು." ಎಂದನು.

ಆ ಮೇಲೆ ರೂಪಕುಮಾರಿ ಶ್ರೀಕುಮಾರನನ್ನು ಮದುವೆಯಾಗಲು ಒಪ್ಪಿಕೊಂಡಳು. ಮದುವೆ ಯಾದ ಮೇಲೆ ಬಹುಬೇಗದಲ್ಲೇ ವೈದ್ಯರು ಹೇಳಿದಂತೆ ಶ್ರೀಕುಮಾರನ ಶರೀರದ ಕಪ್ಪು ಬಣ್ಣವು ಮರೆಯಾಗಿ ಅವನ ಸಹಜ ವರ್ಣವೂ ಬಂದಿತು.

ಕಪ್ಪಗಾಗಿದ್ದ ಚಮಚವು ಹಾಗೆ ಹೊಳೆಯಲು ಕಾರಣವೇನಿರಬೇಕೆಂದರೆ, ಏನೂ ಇಲ್ಲ. ಮಸಿ ತಡವಲ್ಪಟ್ಟ ಚಮಚವು ನೀರಿನೊಳಗೆ ತಳತಳನೆ ಹೊಳೆಯುತ್ತದೆ. ಅಷ್ಟೇ!



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೭೭ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



P. Sundaram

★



P. Sundaram

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜೂನ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಇಲ್ಲಿರುವುದು ಯಾರವಳು?**

ಎರಡನೇ ಫೋಟೋ: **ಅದು ನಾನೇ ಅಂದರೆ ಮಾಯೆ ಕಣಾ!**

ಕಳುಹಿಸಿದವರು: ಕೆ. ವಿ. ಪ್ರಸನ್ನ,

ರಂಗಸಮುದ್ರ, ತುಮಕೂರು ಡಿಸ್ಟ್ರಿಕ್ಟ್

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.**



# ಕರಡಿಕೆಂಗಣ್ಣ

೧೧

[ದುರ್ಮುಖರಾಜನು ಅರಣ್ಯದಲ್ಲಿ ತಿರುಗುತ್ತಿದ್ದಾಗ ಅವನ ರಾಜಧಾನಿಯನ್ನು ಸಾಮಂತರಾಜನು ಆಕ್ರಮಿಸಿ ಕೊಂಡನು. ತನ್ನ ತಲೆಯನ್ನು ಕರಡಿಮನುಷ್ಯನು ಕಡಿಯುವುದಕ್ಕೆ ಮೊದಲು ತಾನು ಕೆಲವು ಕ್ಷಣಗಳಾದರೂ ರಾಜನಾಗಬೇಕೆಂದು ಅವನು ಕೇಳಿಕೊಂಡನು. ಅದಕ್ಕೆ ಒಪ್ಪಿ ಕರಡಿಮನುಷ್ಯನೂ ಉಗ್ರದಂಡ ರಾಕ್ಷಸನೂ ಅವನ ರಾಜಧಾನಿಗೆ ಬಂದರು. ಆಗಲೇ ಕೋಟೆಯೊಳಗಿನಿಂದ ಕುದುರೇ ಸವಾರರೂ ಸೈನಿಕರೂ ಹೊರಗೆ ಬಂದರು.]

ಕೈಗಳಲ್ಲಿ ಪಳಪಳಿಸುವ ಕೂರಾದ ಈಟಿಗಳನ್ನು ಕುಣಿಸಿಕೊಂಡು ಬರುವ ಅಶ್ವಿಕರನ್ನೂ, ಅವರ ಪಕ್ಕದಲ್ಲಿ ಕತ್ತಿಗಳನ್ನು ಝುಳಪಿಸುತ್ತ ವೀರ ನಡಿಗೆಯಿಂದ ಬರುತ್ತಿರುವ ಕಾಲ್ಬಲವನ್ನೂ ನೋಡಿ ಕಳ್ಳರ ನಾಯಕನಾದ ನಾಗಮಲ್ಲನೂ, ಅವನ ಇಬ್ಬರು ಅನುಚರರೂ ಅದುರಿಬಿದ್ದು ಸ್ತಬ್ಧರಾದರು.

ಹಾಗೆಯೇ ಆನೆಯ ಮೇಲಿದ್ದ ದುರ್ಮುಖನ ಸೈನಿಕರೂ ಮೊದಲು ಹೆದರಿ. ಆ ಮೇಲೆ ಈಗೇನು ಮಾಡುವುದೆಂದು ತವೊಳಗೆ ಗುಸುಗುಸು ಮಾತಾಡ ತೊಡಗಿದರು.

ಅವರನ್ನು ನೋಡಿ ಕಳ್ಳ ನಾಗಮಲ್ಲನಿಗೆ ವಿವೇಕ ಮೂಡಿತು. ತಾನು ಬೆದರಿದಂತೆ ತೋರಿಸಬಾರದೆಂದು ಕೊಂಡು, ತನ್ನ ಅನುಚರರನ್ನು ನೋಡಿ, "ಇದೇನಿದು? ಆ ಸಾಮಂತನ ಇಷ್ಟುಮಂದಿ ಸೈನಿಕರು ಹೀಗೆ ಯುದ್ಧಕ್ಕೇ ಬರುವರೆಂದು ನಾನು ಊಹಿಸಲೇ ಇಲ್ಲ. ಬರಲಿಬಿಡಿ. ನಮಗೇನೂ ಜೀವಕ್ಕೆ ಭಯವಿಲ್ಲ. ನಮ್ಮ ಕಡೆಯವರಾಗಿ ಕಟುಕಕರಡಿಯುವನಿದ್ದಾನೆ. ಅವನಿಗಿಂತ ಮೇಲೆ, ಉಗ್ರದಂಡ ರಾಕ್ಷಸನಿದ್ದಾನೆ. ಅವರಿಬ್ಬರಿಗೆ ಈ ಸೈನ್ಯ ಒಂದು ಲೆಕ್ಕವೇ ? ಸುಮ್ಮನೆ ರಕ್ತವಷ್ಟು ಹರಿಯುತ್ತೆ!" ಎಂದನು.



"ಆನೆಯನ್ನು ಹಿಂದಕ್ಕೆ ತಿರುಗಿಸಿಬಿಡೋಣ ವೇನು ?" ಎಂದು ಒಬ್ಬ ಕಳ್ಳನು ಕೇಳಿದನು.

"ಬೇಡ ಬೇಡ. ಹಾಗೆ ಮಾಡಿದರೆ ಎಲ್ಲರ ದೃಷ್ಟಿಯಲ್ಲಿಯೂ ನಾವು ಮೂರ್ಖರಾಗಿ ಹೋಗುತ್ತೇವೆ. ಈಗ ನಾನು ತಲೆ ಹಾಕಿದ ಉಪಾಯ ಎಷ್ಟರಮಟ್ಟಿಗೆ ಕೆಲಸ ಮಾಡುತ್ತದೋ ಪ್ರಯತ್ನಿಸಿ ನೋಡೋಣ." ಎಂದನು ನಾಗಮಲ್ಲ.

"ಹಾಗಾದರೆ ಆ ಸೈನಿಕರು ನಮ್ಮನ್ನು ಸಮೀಪಿಸುವುದಕ್ಕೆ ಮೊದಲೇ ಏನೋ ಒಂದು ಮಾಡಿಬಿಡು." ಎಂದು ಹೇಳಿ ಒಬ್ಬ ಕಳ್ಳನು, ಗುಸುಗುಸು ಮಾತಾಡುತ್ತಿರುವ ಸೈನಿಕರನ್ನು ನೋಡಿ, "ಓ ಹೋಯ್! ಏನಿದು ನಿಮ್ಮ ಗುಸುಗುಸು ಮಾತು! ಶತ್ರುಗಳೊಂದಿಗೆ ಸೇರಿಕೊಳ್ಳುವ ಉಪಾಯ ಹೊಸೆಯುವಿರೇನು ? ಮೈಯಲ್ಲಿ ಒಂದು ಎಲುವೂ ಉಳಿಯಲಾರದು! ಎಚ್ಚರ!" ಎನ್ನುತ್ತ ಕತ್ತಿಯನ್ನು ಎತ್ತಿ ಹಿಡಿದನು.

ನಾಗಮಲ್ಲನೂ ಆ ಸೈನಿಕರನ್ನು ಕೋಪದಿಂದ ನೋಡಿ, ತನ್ನ ಮುಂಡಾಸನ್ನು ಬಿಚ್ಚಿ ಗಾಳಿಯಲ್ಲಿ ಕೊಡರಿ ತೇಲಿಸಿ, ಜಾಂಡಾದಂತೆ ಎತ್ತೆತ್ತಿ ಬೀಸುತ್ತ, ಯುದ್ಧಕ್ಕೆ ಬರುವ ಸೈನಿಕರನ್ನು ಉದ್ದೇಶಿಸಿ, "ನಿಲ್ಲಿರಿ ನಿಲ್ಲಿರಿ ! ನಾನು ಮಿತ್ರನಾಗಿ ಬಂದಿದ್ದೇನೆ ! ಶತ್ರುವಾಗಿ ಅಲ್ಲ ! ನೀವೆಲ್ಲಾ ಇರುವ ಜಾಗದಲ್ಲೇ ನಿಂತುಬಿಡಿ!" ಎಂದು ಕಂಠ ಹರಿಯುವಷ್ಟು ಗಟ್ಟಿಯಾಗಿ ಕೂಗಿದನು.

ವೇಗವಾಗಿ ಬರುವ ಸೈನಿಕರು ವೇಗವನ್ನು ಕಡಿಮೆ ಮಾಡಿದರು. ನಾಗಮಲ್ಲನು ತನ್ನ ಕೂಗು ಮಾತನ್ನು ಮುಂದು ವರಿಸಿದನು: "ನೀವೆಲ್ಲಾ ಎಲ್ಲಿದ್ದೀರೋ ಅಲ್ಲೇ ನಿಂತು ನನ್ನ ಮಾತು ಕೇಳಿರಿ. ನಿಮ್ಮ ಮಹಾರಾಜರು ಎಲ್ಲಿದ್ದಾರೆ? ನಾವು ನಿಮ್ಮ ಶತ್ರುವಾದ ಹಳೆಯ ರಾಜ ಗತಿ ಗೇಡಿ ದುರ್ಮುಖನನ್ನು ಬಂಧಿಸಿ ಜೀವದೊಂದಿಗೆ ತಂದಿದ್ದೇವೆ. ನಿಮ್ಮ ಪ್ರಭುಗಳು ಏನಾದರೂ ಒಳ್ಳೆಯ ಬಹುಮಾನ ಕೊಟ್ಟರೆ ಆವನನ್ನು ನಿಮಗೆ ಒಪ್ಪಿಸುತ್ತೇವೆ. ಈ ಸಂಗತಿಯನ್ನು ನಿಮ್ಮ ಮಹಾರಾಜರಿಗೆ ತಿಳಿಸಿರಿ!"

ಈ ಮಾತುಗಳನ್ನು ಕೇಳಿ ಆಶ್ವಿಕರೂ, ಪದಾತಿ ಸೈನಿಕರೂ ಹಾಗೆಯೇ ನಿಂತರು. ಆಶ್ವಿಕರ ನಾಯಕನು ಉಳಿದವರನ್ನು ಹಿಂದೆಯೇ ಬಿಟ್ಟು ತಾನು ಮಾತ್ರ ಸ್ವಲ್ಪ ಮುಂದೆ ಬಂದು, "ನೀನು ಹೇಳುವ ಮಾತುಗಳನ್ನು ನಾವು ನಂಬಬೇಕೇನು ? ನಿನ್ನ ಮಾತಿನಲ್ಲಿ ಏನಾದರೂ ಮೋಸವಿದ್ದರೆ ? ನಾವು ಆಗಿನಿಂದಲೂ ನಿಮ್ಮ ಬರುವಿಕೆಯನ್ನು ಗಮನಿಸಿದ್ದೇವೆ. ಕೋಟೆಯ ಮೇಲಿನಿಂದ ನೋಡಿದ್ದೇವೆ. ನಮ್ಮ ಪ್ರಭುಗಳೂ ಮಂತ್ರಿಗಳೂ ನೋಡಿದ್ದಾರೆ. ನಿಮ್ಮನ್ನೆಲ್ಲ ಹತಮಾಡಲಿಕ್ಕೇ ನಮ್ಮನ್ನು ಕಳಿಸಿದ್ದಾರೆ. ನಿನ್ನ ಮಾತು ನಿಜವೆಂದು ಹೇಗೆ ನಂಬಬೇಕು?" ಎಂದನು.

"ಮೋಸಮಾಡುವವರಾದರೆ ಈ ಹಚ್ಚ ಹಗಲು ವೇಳೆಯಲ್ಲಿ, ಕೆಲವೇ ಮಂದಿಗಳೊಂದಿಗೆ ನಿಮ್ಮ ಕೋಟೆಯ ಕಡೆಗೆ ಬರಬಲ್ಲೆವೇ ? ನೀವು ಆಕ್ರಮಿಸಿದ

ಈ ರಾಜಧಾನಿ ಹಳೆಯ ಯಜಮಾನನಾದ ದುರ್ಮುಖರಾಜನು, ಬದುಕಿರುವವರೆಗೆ ಎಂದಿಗಾದರೂ ನಿಮಗೆ, ಅಪಾಯವೇ ಅಂತ ಅಂದು ಕೊಂಡಿದ್ದೇವೆ. ಬಡವರಾದ್ದರಿಂದ ಬಹುಮಾನದ ಆಶೆ. ಒಂದು ವೇಳೆ ನೀವು ನಮಗೆ ತಕ್ಕ ಬಹುಮಾನ ಕೊಟ್ಟು ದುರ್ಮುಖನನ್ನು ಕೊಂಡುಕೊಳ್ಳದೇ ಹೋದರೆ, ನಾವು ಖೈದಿಯೊಂದಿಗೆ ಅರಣ್ಯದೊಳಗೇ ಹೋಗಿಬಿಡುತ್ತೇವೆ." ಎಂದನು ಕಳ್ಳ ನಾಗಮಲ್ಲ.

ನಾಗಮಲ್ಲನ ಮಾತುಗಳನ್ನು ಕೇಳುತ್ತಿದ್ದ ಆಶ್ವಿಕ ನಾಯಕನು, ಏನು ಮಾಡಬೇಕೆಂಬ ಆಲೋಚನೆಗೆ ಬಿದ್ದವನಂತೆ ಸ್ವಲ್ಪ ತಲೆಕೆರೆದುಕೊಂಡನು. ಅದು ವೀರನ ಲಕ್ಷಣವಲ್ಲವೆಂಬುದು ನೆನಪಾಗಿ "ಓಹೋ!" ಎಂದು ಗಟ್ಟಿಯಾಗಿ ಗರ್ಜಿಸಿ, ಮೀಸೆಯನ್ನು ಒಮ್ಮೆ ತೀಡಿ, ಕತ್ತಿಯನ್ನು ನೆಗಹಿ, "ಎಲೋ! ಇಷ್ಟೆಲ್ಲಾ ಪುರಾಣ ಹೇಳಿದವನು ನೀನು ಯಾರೆಂಬುದನ್ನು ಹೇಳಲೇ ಇಲ್ಲ! ನಿನ್ನ ಹೆಸರೇನು?" ಎಂದನು.

ಅವನ ರೀತಿಯನ್ನು ನೋಡಿ, ನಾಗಮಲ್ಲನು ಮನಸ್ಸಿನೊಳಗೇ ನಕ್ಕನು. ಈ ಆಶ್ವಿಕ ವೀರನಿಗೆ ಚುರುಕು ಕಡಿಮೆ ಮತ್ತು ಬುದ್ಧಿಯೂ ತುಸು ಮಂದ ವೆಂದು ಅನಿಸಿತು. ನಾಗಮಲ್ಲನು ತನ್ನ ತಲೆಗೆ ಮುಂಡಾಸನ್ನು ಬಿಗಿಯಾಗಿ ಸುತ್ತಿಕೊಳ್ಳುತ್ತಾ, "ನನ್ನ ಹೆಸರು ನಾಗಮಲ್ಲ. ಎಲ್ಲರೂ ನನ್ನನ್ನು ನಾಗಮಲ್ಲ ದೊರೆಯೆಂದೇ ಕರೆಯುತ್ತಾರೆ. ಅರಣ್ಯದಲ್ಲೇ ವಾಸ. ಅಲ್ಲಿರುವ ಬೆಲೆ ಬಾಳುವ ಪ್ರಾಣಿಗಳನ್ನೂ, ಬೆಲೆ ಯುಳ್ಳವರಾದ ಮಹಾ ಮಹಾ ಶ್ರೀಮಂತರನ್ನೂ ಹಿಡಿದು ಅವರನ್ನು ಕೊಂಡುಕೊಳ್ಳ ಬಲ್ಲಂಥವರಿಗೆ ಮಾರುವುದು ನನ್ನ ಮುಖ್ಯವೃತ್ತಿ." ಎಂದನು.

"ಹಾಗೆ ಹೇಳು ಮತ್ತೆ. ಗೊತ್ತಾಯಿತು ಈಗ. ಇಲ್ಲೇ ಇರು. ನೀನು ಹೇಳಿದ ಸಂಗತಿಯನ್ನು ನಮ್ಮ ಪ್ರಭುಗಳಿಗೆ ತಿಳಿಸಿ ಅವರ ಅಪ್ಪಣೆ ಕೇಳಿಬರುತ್ತೇನೆ." ಎಂದು ಹೇಳಿ ಆಶ್ವಿಕನಾಯಕನು ಕುದುರೆಯನ್ನು



ಹಿಂದಕ್ಕೆ ತಿರುಗಿಸುತ್ತ, "ಲೋ ನಾಗಮಲ್ಲಾ, ನಿನ್ನ ಹಿಂದೆ ಗುಂಪು ಕಟ್ಟಿಕೊಂಡಿರುವವರಲ್ಲಿ ಒಬ್ಬ ರಾಕ್ಷಸಾಕಾರದವನೂ, ಕೊಡಲಿ ಹಿಡಿದಿರುವ ಕರಡಿಯೊಂದೂ ಇದೆಯಲ್ಲಾ? ಯಾರವರೂ? ನಮ್ಮ ಮಂತ್ರಿಗಳು ಹೇಳುವ ಹಾಗೆ ವೇಷ ಹಾಕಿಕೊಂಡಿರುವ ಕಾಡು ಮನುಷ್ಯರೇನಾ?" ಎಂದು ಕೇಳಿದನು.

"ಆ! ಆ! ಮಹಾರಾಜರು ನಮ್ಮನ್ನು ಸಂತೋಷ ಪಡಿಸಿದರೆ ನಾವೂ ನಮ್ಮ ಆಟತೋರಿಸಿ ಅವರನ್ನೂ ಸಂತೋಷಪಡಿಸಲು ಬಂದಿದ್ದೇವೆ. ಅವರು ಯಾರೂ ಅಂತ ಗೊತ್ತಾಗಬೇಕಾದರೆ ನಿಮ್ಮ ಮಹಾರಾಜರೇ ಇಲ್ಲಿಗೆ ಬರಲಿ. ಅವರ ಕೈಯಿಂದಲೇ ಬಹುಮಾನದ ಹಣಪಡೆದು, ಹಳೆಯ ದುರ್ಮುಖರಾಜನನ್ನು ಅವರಿಗೆ ಒಪ್ಪಿಸಿ ಆ ವೇಷಧಾರಿಗಳ ಪರಿಚಯವನ್ನೂ ಮಾಡಿಸುತ್ತೇವೆ." ಎಂದನು ನಾಗಮಲ್ಲ ನಗುತ್ತಾ.

ಆಶ್ವಿಕನಾಯಕನು ತೃಪ್ತಿಯಿಂದ ತಲೆಯೊಲಿದು, ಕತ್ತಿಯನ್ನು ಮೇಲೆತ್ತಿ ಸೈನಿಕರೊಂದಿಗೆ, "ನೀವೆಲ್ಲಾ



ಇದ್ದ ಜಾಗದಿಂದ ಒಂದಡಿ ಮುಂದೆಯೂ ಹಿಂದೆಯೂ ಇಡಕೂಡದು. ಹಾಗೆಯೇ ನಿಂತಿರಿ. ಕದಲಿದಿರೆಂದರೆ ನಿಮ್ಮ ತಲೆಗಳು ಮುಂಡದ ಮೇಲಿರಲಿಕ್ಕಿಲ್ಲ. ನಮ್ಮ ಮಂತ್ರಿಗಳು ಊಹಿಸಿದಂತೆ ಅವರೆಲ್ಲ ಕೇವಲ ವೇಷ ಧಾರಿಗಳೇ. ನಾನೀಗಲೇ ಹೋಗಿ ಮಹಾರಾಜರೊಡನೆ ಸಂಗತಿ ಸಂದರ್ಭಗಳನ್ನು ಹೇಳಿ ಬಂದು ಬಿಡುತ್ತೇನೆ." ಎಂದು ಹೇಳಿ, ತನ್ನ ಕುದುರೆಯನ್ನು ಕೋಟೆಯ ದ್ವಾರದ ಕಡೆಗೆ ಓಡಿಸಿಕೊಂಡು ಹೋದನು.

ಕೋಟೆಯ ಗೋಡೆಯ ಮೇಲಿರುವ ಉನ್ನತವಾದೊಂದು ಬುರುಜಿನ ಪಕ್ಕದಲ್ಲಿ ಮಂತ್ರಿಯೊಂದಿಗೆ ನಿಂತು ಎಲ್ಲವನ್ನೂ ನೋಡಿಕೊಂಡಿದ್ದ ಸಾಮಂತನಾದ ಸೂರ್ಯಭೂಪತಿ, ಆಶ್ವಿಕನಾಯಕನು ತಮ್ಮ ಬಳಿಗೆ ಬಂದಕೂಡಲೇ, "ಏನಿದು ನಿನ್ನ ಮೂರ್ಖತ್ವ! ಶತ್ರುಗಳ ಮೇಲೆ ದಾಳಿಮಾಡಿ ಹತಾಹತ ಮಾಡುವುದನ್ನು ಬಿಟ್ಟು ಅವರೊಡನೆ ರಾಯಭಾರ ನಡೆಸಿಕೊಂಡಿರುವೆಯಾ ? " ಎಂದು ಅಧಟಿ ಕೇಳಿದನು.

ಆಶ್ವಿಕ ನಾಯಕನು ನಡೆದ ಸಂಗತಿಯನ್ನು ತುಂಬ ವಿನಯದಿಂದ ಹೇಳಿ, "ಹೀಗೆ ಅವರು ಕೇವಲ ವೇಷಧಾರಿಗಳೇ. ಯುದ್ಧಮಾಡಲು ಬಂದವರೇನಲ್ಲ. ಏನೋ ಸ್ವಲ್ಪ ಧನವನ್ನು ಕೊಟ್ಟರೆ ದುರ್ಮುಖ ರಾಜನನ್ನು ನಮಗೆ ಒಪ್ಪಿಸಿ ಹೋಗಿಬಿಡುತ್ತಾರೆ. ಇದು ಹೊಸ ಸಂಗತಿಯಾದುದರಿಂದ ತಮಗೆ ಅರಿಕೆ ಮಾಡಬೇಕಾದುದು ನನ್ನ ಕರ್ತವ್ಯವಲ್ಲವೇ ಮಹಾರಾಜರೇ? " ಎಂದನು.

ದುರ್ಮುಖರಾಜನ ಹೆಸರು ಕೇಳುತ್ತಲೇ ಆ ಸಾಮಂತರಾಜನ ಹೃದಯಕ್ಕೆ ಹುಳಿ ಹಿಂಡಿದ ಹಾಗಾಯಿತು. ಅವನು ಇನ್ನಷ್ಟು ಕೋಪದಿಂದ, "ಆ ರಾಜ ಇನ್ನೂ ಬದುಕಿದ್ದಾನೇನು ? ಕಾಡಿನೊಳಗೆ ಯಾವುದೋ ಕ್ರೂರ ಮೃಗಗಳ ಹೊಟ್ಟೆಗೆ ಹೋದನೆಂದು ಕಣ್ಣಾರೆ ಕಂಡಹಾಗೆ ನಮ್ಮ ಗೂಢಚಾರರು ಹೇಳಿದರಲ್ಲಾ? ಸುಳ್ಳು ಸಮಾಚಾರ ಹೇಳಿ ಇನಾಮು ಹೊಡೆದುಕೊಂಡ ಅವರ ತಲೆಗಳನ್ನು ಮೊದಲು ಕಡಿದುರುಳಿಸಬೇಕು, ಮಹಾಮಂತ್ರಿ, ಈಗಲೇ ಹೋಗಿ ಆ ಗೂಢಚಾರಿಗಳ ತಲೆಗಳನ್ನು ಹಾರಿಸಿಬಿಡು ! " ಎಂದನು.

ಮಂತ್ರಿ ಮುಖದಲ್ಲಿ ವಿಚಾರವನ್ನು ವ್ಯಕ್ತಪಡಿಸುತ್ತ, "ಮಹಾರಾಜರೆ, ಆ ಇಬ್ಬರು ಗೂಢಚಾರರೂ ಸದ್ಯ ರಾಜಧಾನಿಯಲ್ಲಿಲ್ಲ. ಅವರನ್ನು ನಾನೇ ಅರಣ್ಯಕ್ಕೆ ಕಳುಹಿಸಿದ್ದೇನೆ. ಇನ್ನೊಂದು ವಿಷಯ ಹೇಳುತ್ತೇನೆ. ಸ್ವಲ್ಪ ಆಳವಾಗಿ ಆಲೋಚಿಸುವಾಗ, ಆ ಮಹಾಕಾಯದವನು ನಿಜವಾದ ರಾಕ್ಷಸನೇ ಎಂದೂ, ಆ ಕರಡಿ ಕೂಡಾ ಯುದ್ಧದ ತರಬೇತಿ ಪಡೆದಿರುತ್ತದೆಂದೂ ಅನುಮಾನವಾಗುತ್ತದೆ. ಎಲ್ಲಕ್ಕಿಂತಲೂ ದೊಡ್ಡ ಸಂಶಯವೇನೆಂದರೆ, ಅವರು ಬಂಧಿಸಿ ತಂದಿದ್ದೇವೆಂಬವನು ನಿಜವಾದ ದುರ್ಮುಖನು ಅಲ್ಲದೇ ಹೋದರೆ, ಸುಮ್ಮನೆ ಧನನಷ್ಟ. ನಾವು ದುರ್ಮುಖನಿಗೆ ಹೆದರಿಕೊಂಡೇ

ಇದ್ದೇವೆಂಬುದನ್ನು ಡಂಗುರ ಹೊಡೆದು ಸಾರಿದ ಹಾಗಾದೀತಲ್ಲ ? " ಎಂದನು.

ಮಂತ್ರಿಯ ಮಾತು ಕೇಳಿ ಸಾಮಂತ ಸೂರ್ಯ ಭೂಪತಿಗೆ ಕೋಪವು ಇನ್ನೂ ಹೆಚ್ಚಿತು. "ನಾನು ಈ ಕೋಟೆಯನ್ನು ಆಕ್ರಮಿಸುವಾಗ ನೀನು ಕೊಟ್ಟ ಸಲಹೆಗಳಿಗೆ ಮೆಚ್ಚಿ ನಿನಗೆ ಮುಖ್ಯಮಂತ್ರಿ ಪದವಿ ಕೊಟ್ಟದ್ದು ನನ್ನದೇ ತಪ್ಪಾಯಿತು. ನೀನು ಕೇವಲ ಒಬ್ಬ ಸಾಮಂತನಿಗೆ ಸಲಹೆ ಕೊಡಬಹುದು. ಅಷ್ಟೇ ಹೊರತು ಮಹಾರಾಜನ ಮಂತ್ರಿಯಾಗಿರಲು ಅರ್ಹನೇ ಅಲ್ಲ." ಎಂದು ನಿಂದಿಸಿ, ಆಶ್ವಿಕ ನಾಯಕ ನೊಂದಿಗೆ, "ಮಹಾ ಸೇನಾನೀ ! ನೀನು ಮಾಡಿದ್ದು ತಪ್ಪೇನಲ್ಲ ಬಿಡು. ಕೇವಲ ಹತ್ತು ಮಂದಿ ಕೂಡಾ ಇಲ್ಲದ ಆ ಕಾಡು ಜನರೊಂದಿಗೆ ನಮಗೇನು ರಾಯ ಭಾರ ಬೇಕಾಗಿದೆ ? ಮರ್ಯಾದೆಯಾಗಿ ಶರಣಾಗ ಬೇಕೆಂದು ಹೇಳು. ತಪ್ಪಿದರೆ ಹೆಡೆ ಮುರಿಗೆಕಟ್ಟಿ ಎಳೆದುಕೊಂಡು ಬಾ. ಹೋಗು !" ಎಂದನು.

ಚಂಚಲ ಸ್ವಭಾವದ ಆಶ್ವಿಕ ನಾಯಕನು ಮತ್ತೇನೋ ಸಂದೇಹದಿಂದ, "ಆ ಮಹಾಕಾಯ ದವನು ವೇಷಧಾರಿಯೇ ಆದರೂ, ಅರಣ್ಯದಲ್ಲಿ ಯಾವನೋ ಒಬ್ಬ ರಾಕ್ಷಸನಿರುವನೆಂದು ಹೇಳುವುದು ಕೇಳಿದ್ದೇವೆ. ಇವನು ನಿಜವಾದ ರಾಕ್ಷಸನೇ ಆಗಿದ್ದರೆ ಅಪಾಯವಾಗಲಿಕ್ಕಿಲ್ಲವೇ ಪ್ರಭುಗಳೇ ? " ಎಂದು ತಗ್ಗಿದ ದನಿಯಿಂದ ಕೇಳಿದನು.

ಸೂರ್ಯಭೂಪತಿ ಹಲ್ಲು ಕಡಿದು, "ನಿನ್ನೊಂದಿ ಗಿರುವ ಸೈನ್ಯದಿಂದ ಒಬ್ಬ ರಾಕ್ಷಸನನ್ನೇನು, ನೂರು ಮಂದಿ ರಾಕ್ಷಸರನ್ನೂ ಹಿಡಿದು ಬಂಧಿಸಬಹುದು. ನಿಮಗೆ ಧೈರ್ಯ ಬರಬೇಕಾದರೆ ನಾನೇ ಹೊರಡ ಬೇಕು. ಎಲ್ಲಿ ನನ್ನ ಯುದ್ಧಾಶ್ವ ? ಸಿದ್ಧವಾಗಲಿ !" ಎಂದವನೇ ಆ ಬುರುಜಿನ ಮೇಲಿನಿಂದ ಬೇಗಬೇಗನೇ ಕೆಳಗಿಳಿದನು. ಅವನ ಹಿಂದೆಯೇ ಮಂತ್ರಿಯೂ, ಆಶ್ವಿಕನಾಯಕನೂ ಕೆಳಗೆ ಬಂದರು.



ಸೇವಕನೊಬ್ಬನು ಓಡಿ ಹೋಗಿ ಕುದುರೆಯನ್ನು ತಂದ ಕೂಡಲೇ ಸೂರ್ಯಭೂಪತಿ ಅದರ ಮೇಲೆ ಟಣ್ಣನೆ ಹಾರಿ ಕುಳಿತನು. ಪಕ್ಕದಲ್ಲಿದ್ದ ಇನ್ನೊಂದು ಕುದುರೆಯ ಮೇಲೆ ಮಂತ್ರಿಯೂ ಏರಿದನು. ಮುಂದಾಗಿ ಸೂರ್ಯಭೂಪತಿಯೂ, ಅವನ ಪಕ್ಕದಲ್ಲಿ ಮಂತ್ರಿಯೂ, ಅವರ ಹಿಂದೆ ಸೇನಾನಿಯೂ ಹೊರಟು ಕೋಟೆಯ ದ್ವಾರವನ್ನು ದಾಟಿ ಮೈದಾನ ಪ್ರದೇಶಕ್ಕೆ ಮುಟ್ಟಿದರು.

ರಾಜನೇ ಬರುವುದನ್ನು ನೋಡಿ ಕಳ್ಳರ ನಾಯಕ ನಾಗಮಲ್ಲನಿಗೆ ಬಹಳ ಸಂತೋಷವಾಯಿತು. ಅವನು ಉತ್ಸಾಹದಿಂದ, "ಆಹಾ ! ನನ್ನ ಉಪಾಯ ನೆರ ವೇರಿತು. ಆ ಸಾಮಂತರಾಜ, ನಮ್ಮ ಬಲೆಗೆಬೀಳಲು ಬರುತ್ತಿದ್ದಾನೆ !" ಎಂದನು.

"ಈ ಮೂವರನ್ನೂ ಬಂಧಿಸಿ ಹಿಡಿದುದಕ್ಕೆ ದುರ್ಮುಖರಾಜನಿಂದ ಏನಾದರೂ ಬಹುಮಾನ ಸಿಗುತ್ತದೆ ಅಲ್ಲವೆ ಒಡೆಯಾ ? " ಎಂದು ಉಳಿದ



ಕಳ್ಳರಲ್ಲೊಬ್ಬನು ಕೇಳಿದನು. "ಕೊಡಲೇಬೇಕಲ್ಲ ?" ಎಂದ ಇನ್ನೊಬ್ಬ ಕಳ್ಳ ನಗುತ್ತ.

"ಬರಿಯ ಬಹುಮಾನದಲ್ಲೇ ಇದ್ದೀರಿ ನೀವು. ನಿಮಗಿಬ್ಬರಿಗೂ ದುರ್ಮುಖರಾಜನು ಒಂದು ಸಂಸ್ಥಾನವನ್ನೇ ಕೊಡುತ್ತಾನೆ" ಎಂದು ಪಕ್ಕದಲ್ಲಿದ್ದ ಸೈನಿಕರಿಬ್ಬರು ಒರೆಗಳಿಂದ ಕತ್ತಿಯನ್ನೆತ್ತಲು ನೋಡಿದರು. ಅಷ್ಟರೊಳಗೆ ನಾಗಮಲ್ಲನು ಸುಮ್ಮನಿರುವಂತೆ ಅವರನ್ನು ಎಚ್ಚರಿಸಿದನು.

ಸಾಮಂತ ಸೂರ್ಯಭೂಪತಿ ನಾಗಮಲ್ಲನ ಆನೆಯ ಸಮೀಪಕ್ಕೆ ಬಂದು, "ಎಲೋ, ನೀನು ಹೇಳಿದ್ದನ್ನೆಲ್ಲಾ ನಮ್ಮ ಸೇನಾಪತಿ ನನಗೆ ತಿಳಿಸಿದ್ದಾನೆ. ನನ್ನ ರಾಜ್ಯದೊಳಗೆ, ನನ್ನ ಕೋಟೆಯ ಮುಂದೆ ಸೇರಿ ಮಹಾರಾಜನಾದ ನನ್ನೊಂದಿಗೆ ವ್ಯಾಪಾರದ ಚೌಕಾಸಿ ಮಾಡುವಿಯೇನು ? ಅಷ್ಟು ಸೊಕ್ಕು ಬಂದಿದೆಯೇ ನಿನಗೆ ? ಈ ಕೂಡಲೇ ಆನೆಯ ಮೇಲಿರುವ ದುರ್ಮುಖನನ್ನೂ, ಉಳಿದ ಆ ವೇಷಧಾರಿಗಳನ್ನೂ ನನ್ನ ಮುಂದೆ ಹಾಜರುಪಡಿಸು. ನನ್ನ ಹಿಂದೆ ಕೋಟೆಯೊಳಗೆ ಕೈ ಕಟ್ಟಿಕೊಂಡು ಬಾ, ನಿನಗೂ ಆ ರಾಕ್ಷಸವೇಷ, ಕರಡಿ ವೇಷದವರಿಗೂ ನಾನು ಕೊಡುವ ಬಹುಮಾನ ತೆಗೆದುಕೊ. ದುರ್ಮುಖನ ತಲೆಯನ್ನು ಕೋಟೆಯ ತುದಿಗೆ ಕಟ್ಟಬೇಕೋ, ದ್ವಾರದಲ್ಲಿ ನೇತಾಡಿಸಬೇಕೋ ಆಮೇಲೆ ನಿಶ್ಚಯಿಸುತ್ತೇನೆ" ಎಂದು ಕಡೆಯ ಮಾತನ್ನು ತನ್ನ ಮಂತ್ರಿಯನ್ನು ನೋಡಿ ಹೇಳಿದನು.

ಸೂರ್ಯಭೂಪತಿಯ ಮಾತು ಕೇಳಿದ ಕೂಡಲೇ ತನ್ನ ಉಪಾಯವು ವಿಪರೀತಕ್ಕಿಟ್ಟಿತೆಂದು ಕಳ್ಳರ ನಾಯಕನಿಗೆ ತಿಳಿದುಬಿಟ್ಟಿತು. ಅವನ ಮಟ್ಟಿಗೆ ದುರ್ಮುಖರಾಜನೂ, ಸೂರ್ಯಭೂಪತಿಯೂ ಒಂದೇ ಆಗಿದ್ದರು. ಇಬ್ಬರ ಮೇಲೆಯೂ ಅವನಿಗೆ ಪ್ರತ್ಯೇಕವಾದ ದ್ವೇಷವೋ ಗೌರವವೋ ಇರಲಿಲ್ಲ. ಸೂರ್ಯಭೂಪತಿ ಅಹಂಕಾರಾತಿರೇಕದಿಂದ ಉಗ್ರದಂಡ ರಾಕ್ಷಸನನ್ನೋ, ಕಟುಕಕರಡಿಯವನನ್ನೋ ಕೆಣಕಿದನೆಂದರೆ ದೊಡ್ಡದೊಂದು ರಕ್ತದ ಕಾಲುವೆ ಹರಿದುಬಿಡುತ್ತದೆ. ಹಾಗಾಗುವುದು ನಾಗಮಲ್ಲನಿಗೆ ಇಷ್ಟವಿರಲಿಲ್ಲ.

ಏನು ಉತ್ತರ ಕೊಡಬೇಕೆಂದು ನಾಗಮಲ್ಲನು ಆಲೋಚಿಸುತ್ತಿರಲು, ಆನೆಯ ಮೇಲಿದ್ದ ದುರ್ಮುಖನ ಸೈನಿಕರಿಬ್ಬರೂ ತಟಕ್ಕನೆ ಕತ್ತಿಗಳನ್ನು ಹಿರಿದು, "ದುರ್ಮುಖ ಮಹಾರಾಜರಿಗೆ ಜಯವಾಗಲಿ !" ಎಂದು ಕೂಗಿ ಎದ್ದುನಿಂತು, ಸಾಮಂತ ಸೂರ್ಯಭೂಪತಿಯನ್ನು ನೋಡಿ, "ಎಲೋ, ಸೂರ್ಯಭೂಪತಿ ! ನೀನು ಸಾಯಲಿಕ್ಕೇ ಬಂದವನು ! ನಮ್ಮ ದುರ್ಮುಖ ಮಹಾರಾಜರಿಗೆ ಸಹಾಯಕರಾಗಿ ಬಂದವರು ವೇಷಧಾರಿಗಳೆಂದುಕೊಂಡೆಯಾ ? ಹುಚ್ಚಾ ! ನಿಜವಾದ ರಾಕ್ಷಸನೇ ! ಮತ್ತೊಬ್ಬನನ್ನು ಯಾರೆಂದುಕೊಂಡೆ ? ಮಹಾ ಮಂತ್ರ ಶಕ್ತನಾದ ಕಟುಕಭಲ್ಲೂಕ ವೀರ !" ಎಂದು ಗರ್ಜಿಸಿ ಹೇಳಿದರು.



"ದುರ್ಮುಖಿ ಮಹಾರಾಜರಿಗೆ ಜೈ !" ಎಂಬ ಕೂಗು ಕೇಳಿದ ಕೂಡಲೇ, ಕೋಪೋದ್ರೇಕದಿಂದ ಉಕ್ಕಿ ಹೋದ ಸೂರ್ಯಭೂಪತಿ, ಸೈನಿಕರು ಹೇಳಿದ ಉಳಿದ ಮಾತುಗಳೇನನ್ನೂ ಕಿವಿಗೆ ಹೊಗಿಸಿಕೊಳ್ಳ ಲಿಲ್ಲ. ಅವನು ಪಕ್ಕದಲ್ಲಿದ್ದ ತನ್ನ ಮಂತ್ರಿ ಸೇನಾ ನಾಯಕರೊಂದಿಗೆ, "ಕದಲಿ ಬನ್ನಿ. ನನ್ನ ಮುಂದೆ ನಿಂತು ಹರಟುವ ಈ ಸೊಕ್ಕಿನವನಿಗೂ, ಹಿಂದೆನಿಂತು ವಿನೋದ ನೋಡುವ ವೇಷಧಾರಿಗಳಿಗೂ ನನ್ನ ಶಕ್ತಿ ಎಂತಹುದೆಂದು ತೋರಿಸಬೇಕು. ನಿಮ್ಮಲ್ಲಿ ಕೆಲವರು ಹಿಂದೆ ಓಡಿ ಹೋಗಿ ಇನ್ನಿಷ್ಟು ಅಶ್ವಿಕರನ್ನೂ ಪದಾತಿ ಗಳನ್ನೂ ಕರೆದುಕೊಂಡುಬನ್ನಿರಿ. ಇವರು ಕಾಡಿ ನೊಳಗೆ ಓಡಿ ಹೋಗದ ಹಾಗೆ ಸುತ್ತಲೂ ಮುತ್ತಿಗೆ ಹಾಕಿ ಹಿಡಿಯಿರಿ !" ಎಂದು ಕಿರುಚುತ್ತಾ ಹೇಳಿ, ಕತ್ತಿ ಯನ್ನು ಎತ್ತಿ ಕುಣಿಸುತ್ತಾ ನಾಗಮಲ್ಲನ ಆನೆಯ ಕಡೆಗೆ ತನ್ನ ಕುದುರೆಯನ್ನು ಹುರುಡಿಸಿದನು.

ಮುಗಿಬೀಳುವ ಗಂಡಾಂತರವನ್ನು ಕ್ಷಣ ಮಾತ್ರ ದಲ್ಲಿ ನಾಗಮಲ್ಲನು ಅರಿತು ತನ್ನ ಆನೆಯನ್ನು ಹಿಂದಕ್ಕೆ ತಿರುಗಿಸಿ, ಉಗ್ರದಂಡ ರಾಕ್ಷಸ ಮೊದಲಾದವರ ಕಡೆಗೆ ಓಡಿಸುತ್ತ, "ಕಟುಕ ಭಲ್ಲೂಕ ಪ್ರಭುಗಳೇ ! ರಾಕ್ಷ ಸಾಧೀಶರೇ ! ನನ್ನ ಉಪಾಯ ತಿರುಗಿ ಹೊಡೆಯಿತು. ಸಾಮಂತನು ನಮ್ಮ ಮೇಲೆ ಎಲ್ಲಾ ಸೈನ್ಯವನೂ ಮುಗಿಬೀಳಿಸುತ್ತಾನೆ." ಎಂದು ಕೂಗಿಹೇಳಿದನು.

ಸೂರ್ಯಭೂಪತಿ ತನ್ನನ್ನು ಅವಮಾನಿಸಿದರೂ ತನ್ನಲ್ಲಿ ರಾಜಭಕ್ತಿ ಸ್ವಲ್ಪವೂ ತಗ್ಗಲಿಲ್ಲವೆಂಬುದನ್ನು ನಿರೂಪಿಸಲು ಇದೇ ತಕ್ಕ ಸಮಯವೆಂದುಕೊಂಡು ಅವನ ಮಂತ್ರಿ ತನ್ನ ಕುದುರೆಯನ್ನೂ ನಾಗಮಲ್ಲನ ಆನೆಯ ಕಡೆಗೆ ಧುಮುಕಿಸಿದನು. ಹಾಗೂ ತನ್ನ ಪ್ರಭುವಿಗಿಂತಲೂ ದೊಡ್ಡ ಕಂಠದಿಂದ, "ಎಲೋ ದೇಶದ್ರೋಹಿಗಳೇ ! ನಿಲ್ಲಿರಿ ! ನಿಮ್ಮೆಲ್ಲರನ್ನೂ ಸೂರ್ಯಭೂಪತಿ ಮಹಾರಾಜರು ಶಿರಚ್ಛೇದನ ಮಾಡಿದ ಹೊರತು ಬಿಡಲಾರರು ! ತಪ್ಪಿಸಿಕೊಂಡು ಓಡಲು ಸಾಧ್ಯವೇ ಇಲ್ಲ !" ಎಂದು ಕೂಗಿದನು. ಇಷ್ಟರೊಳಗೆ ಸೇನಾನಾಯಕನು ದೂರದಲ್ಲಿದ್ದ ಸೈನ್ಯವನ್ನು ಮುಂದಕ್ಕೆ ಬರುವಂತೆ ಆಜ್ಞೆ ಮಾಡಿದನು. ಅದರಂತೆ ಅಶ್ವಬಲ, ಕಾಲ್ಬಲಗಳೂ ಮುಂದೆ ಬಂದು ಸೂರ್ಯಭೂಪತಿಯ ಹಿಂಬದಿಯಲ್ಲಿ ಸೇರಿದುವು. ಇದನ್ನೆಲ್ಲ ನೋಡಿ ನಾಗಮಲ್ಲನು ಉಗ್ರದಂಡ ಕಟುಕ ಕರಡಿಗಳ ಹತ್ತಿರ ಹೋಗಿ ತಿರುಗಿನಿಂತನು. ಯಾರೂ ಅಲ್ಲಿಂದ ಓಡುವ ಪ್ರಯತ್ನಮಾಡಲಿಲ್ಲ.

ತನ್ನ ರಾಜಧಾನಿಯನ್ನು ಆಕ್ರಮಿಸಿದ ಸಾಮಂತ ಸೂರ್ಯಭೂಪತಿಯನ್ನು ಕಣ್ಣೆದಿರಿನಲ್ಲಿ ನೋಡಿ, ದುರ್ಮುಖಿರಾಜನು ಅತ್ಯುಗ್ರನಾಗಿ, ಕತ್ತಿ ಹಿರಿದು ಆನೆಯ ಮೇಲೆ ಎದ್ದು ನಿಂತು, "ಎಲೋ ! ಅಲ್ಪ ಸಾಮಂತನೆ ! ಸೊಕ್ಕು ನೆತ್ತಿಗೇರಿದ ಸೂರ್ಯ ಭೂಪತೀ ! ನಾನು ದಿಗ್ವಿಜಯಕ್ಕೆ ಹೊರಟ ಸಂಧಿ ನೋಡಿ, ನನ್ನ ರಾಜಧಾನಿಯನ್ನೇ ಆಕ್ರಮಿಸಿ ಈಗ ನನ್ನ ಮುಂದೆಯೇ ಯುದ್ಧಕ್ಕೆ ನಿಂತೆಯಾ ? ಇಕೋ !

ಈಗಲೇ ನಿನ್ನ ತಲೆ ಭೂಮಿಗಿಳಿಯುತ್ತದೆ!" ಎಂದು ಗರ್ಜಿಸಿಕೊಂಡೇ, ಸೈನಿಕರು ತಡೆದರೂ ಕೇಳದೆ, ಸಾಮಂತನ ಕುದುರೆಯ ಮೇಲಕ್ಕೇ ಹಾರುವ ಪ್ರಯತ್ನದಲ್ಲಿ ಪಟ್ಟುತಪ್ಪಿ ನೆಲಕ್ಕೆ ಕೌಚಿಬಿದ್ದು, ಆ ಕೂಡಲೇ ಪುಟಿದೆದ್ದು ನಿಂತನು.

ಆದನ್ನು ನೋಡಿ ಕಟುಕಭಲ್ಲೂಕನು ಗಟ್ಟಿಯಾಗಿ ಚಪ್ಪಾಳೆ ತಟ್ಟುತ್ತ, "ಆಹಾ! ಹೇಡಿಯಂತಿದ್ದ ರಾಜನಿಗೆ ತನ್ನ ಸ್ಥಳದ ಹತ್ತಿರ ಎಂಥ ಸಾಹಸ ಬಂದು ಬಿಟ್ಟಿತು! ಅರಣ್ಯದಲ್ಲಿರುವ ಒಂದು ಚಿರತೆಯನ್ನು ಇದಿರಿಸಿಕೊಳ್ಳುವಷ್ಟು ಧೈರ್ಯವಿಲ್ಲದ ದುರ್ಮುಖ ರಾಜನು ತನ್ನ ಕೋಟೆಯ ಹತ್ತಿರ ಬಂದು, ಸಿಂಹಾಸನವನ್ನು ನೆನೆದು ಶತ್ರುಗಳ ಮೇಲೆ ಮೊಂಡಿ ಧೈರ್ಯದಿಂದ ಹಾಯುತ್ತಾನಲ್ಲ!" ಎಂದನು ಗಟ್ಟಿಯಾಗಿ.

ತನ್ನ ಶತ್ರು ಕೆಳಗೆ ಬಿದ್ದು ಏಳುವುದನ್ನು ನೋಡಿ, ಸಾಮಂತ ಸೂರ್ಯಭೂಪತಿ ಹಿಡಿಸಲಾರದಷ್ಟು ಸಂತೋಷದಿಂದ, "ಆಹ! ವ್ರಣಶೇಷ, ಶತ್ರುಶೇಷ ಗಳು ಪ್ರಾಣಕ್ಕೇ ಅಪಾಯವೆನ್ನುತ್ತಾರೆ ಹಿರಿಯರು. ದುರ್ಮುಖ ರಾಜಾ, ನಿನ್ನ ಬೊಗಳುವ ಹುಚ್ಚು ತಲೆ ಈಗಲೇ ಉದುರಿ ಬೀಳುತ್ತದೆ!" ಎನ್ನುತ್ತ ಕತ್ತಿಯನ್ನು ಚಾಚಿ, ದುರ್ಮುಖನ ಕಡೆಗೆ ಕುದುರೆ ಯನ್ನು ಹಾರಿಸಿದನು.

ಅದೇ ಸಮಯದಲ್ಲಿ ಆನೆಯ ಕುಂಭಸ್ಥಳದಲ್ಲಿರುವ ಆಟವಿಕ ಯುವಕನು, ತಟ್ಟನೆ ಬಿಲ್ಲನ್ನೆತ್ತಿ, ಬಾಣ ಹೂಡಿ ಸೂರ್ಯಭೂಪತಿಯ ಕಡೆಗೆ ಪ್ರಯೋಗಿ ಸಿದನು. ಬಾಣವು ಗುರಿತಪ್ಪಿ ಸಾಮಂತನು ಏರಿ ಕೊಂಡ ಕುದುರೆಯ ಹಣೆಯಲ್ಲಿ ಚುಚ್ಚಿಕೊಂಡಿತು. ಕುದುರೆ ಕೆಟ್ಟದನಿಯಿಂದ ಹೇಷ್ಕರಿಸುತ್ತ ಹಿಂದಿನ ಕಾಲುಗಳ ಮೇಲೆ ಎದ್ದು ನಿಂತಿತು.

ಆಗ ಹಿಂದೆ ಮಗುಚಿ ಬೀಳಲಿಕ್ಕಿದ್ದ ಸಾಮಂತ ಸೂರ್ಯಭೂಪತಿ, ಕಡಿವಾಣವನ್ನು ಬಿಗಿಯಾಗಿ ಹಿಡಿದು ಬೀಳದೆ ಉಳಿದುಕೊಂಡನು. ಅಷ್ಟರೊಳಗೆ ದುರ್ಮುಖನು ಮುಷ್ಟಿ ಘಾತದಿಂದ ಸೂರ್ಯ ಭೂಪತಿಯ ಮಂತ್ರಿಯನ್ನು ಕೆಳಗುರುಳಿಸಿ ಅವನ ಕುದುರೆಯ ಮೇಲೆ ತಾನು ಏರಿಕೊಂಡು, ಸೂರ್ಯ ಭೂಪತಿಯ ಕಡೆಗೆ ಓಡಿಸಿದನು.

ತಾನೀಗ ಶತ್ರುಗಳ ನಡುವೆ ಸಿಕ್ಕಿಕೊಂಡೆನೆಂದು ಸಾಮಂತನಿಗೆ ಗೊತ್ತಾಯಿತು. ಅವನು ಕುದುರೆ ಯನ್ನು ಕೋಟೆಯ ಕಡೆಗೆ ಓಡಿಸುತ್ತ, ಸಾಗಿದನು. ದುರ್ಮುಖರಾಜನು ಕುದುರೆಯನ್ನು ಬೇಗಬೇಗ ಓಡಿಸುತ್ತ ಕತ್ತಿಯನ್ನು ಎತ್ತಿ ಕುಣಿಸಿಕೊಂಡು "ಹೇಡಿ ಸೂರ್ಯಭೂಪತೀ! ಧೈರ್ಯದಿಂದ ನಿಲ್ಲು, ಎಲ್ಲರೂ ನಿಲ್ಲಿರಿ!" ಎನ್ನುತ್ತ ಅವನನ್ನು ಬೆಂಬತ್ತಿದನು.

—(ಇನ್ನೂ ಇದೆ)

